# ಬಂಧುಪ್ರೇಮ.

[ ಒಂದು ಸಾಮಾಜಿಕ ಕಥೆ. ]



ಲೇಖಕ—

“ ಪರಶುರಾಮತನಯ ”



ನವ್ಹಂಬರ ೧೯೨೪.

ಆನಂದವನ-ಆಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಪ. ಕಾಳೆ ಇವರಿಂದ ಛಾಪಿಸಲ್ಪಟ್ಟು, ಅಲ್ಲಿಯೇ ಪ್ರಕಟಿಸಲ್ಪಟ್ಟಿತು.



ಬೆಲೆ ೧೦ ಆಣೆ.

# ಬಂಧುಪ್ರೇಮ.



## [೧]




ಹುಣ್ಣಿವೆಯ ಮರುದಿವಸ; ಸಾಯಂಕಾಲದ ಸಮಯ; ಈಗೀಗ ಆಕಾಶದಲ್ಲಿ ನಕ್ಷತ್ರಗಳು ಮಿನುಗಹತ್ತಿದ್ದವು; ನಿಶಾಕರನು ತನ್ನ ಸ್ನಿಗ್ಧ ಕಿರಣಗಳನ್ನು ಪೃಥ್ವಿಯ ಮೇಲೆ ಹರಡಹತ್ತಿದ್ದನು; ಅಷ್ಟರಲ್ಲಿ ಆಕಾಶವು ಮೇಘಗಳಿಂದ ಸಂದಟಿತವಾಗತೊಡಗಿತು. ನೋಡನೋಡುವಷ್ಟರಲ್ಲಿ ಗಾಳಿಯು ವೇಗದಿಂದ ಬೀಸಲಾರಂಭಿಸಿತು. ತುಸ ಹೊತ್ತಿನ ಮುಂಚೆ ಸೃಷ್ಟಿಸುಂದರಿಯು ಎಂಥ ಅದ್ವಿತೀಯ ರಮಣೀಯತ್ವದಿಂದ ಶೋಭಿಸತೊಡಗಿದ್ದಳೋ, ಕ್ಷಣಾರ್ಧದಲ್ಲಿ ಆಕೆಯ ಸೌಂದರ್ಯವು ಅಳಿದು ಹೋಗಿ, ಅಲ್ಲಿ ಭೀಕರವಾದ ಮೇಘಗರ್ಜನೆಯು ಕೇಳಹತ್ತಿತು. ಹಾ, ಹಾ, ಅನ್ನುವಷ್ಟರಲ್ಲಿ ಘನವಾದ ಮಳೆಯಾಗಿ ಎತ್ತ ನೋಡಿದತ್ತ ನೀರೇ ನೀರಾಗಿ ಹೋಯಿತು. ದಾರಿಯೊಳಗಿನ ರಹದಾರಿಯು ಕೆಲವು ಕಾಲದ ವರೆಗೆ ಕಟ್ಟಾಗಿ ಹೋಯಿತು. ಇಂಥ ಸಮಯದಲ್ಲಿ ಹತ್ತು ವರ್ಷದ ವಯಸ್ಸಿನ ಒಬ್ಬ ಬಾಲಿಕೆಯು ಒಂದು ಸಂದಿಯ ಓಣಿಯೊಳಗಿಂದ ಹೊರಬಿದ್ದಳು. ಆಕೆಯು ಮಾರ್ಗದ ಒಂದು ಪಕ್ಕ ಹಿಡಿದು ಲಗುಬಗೆಯಾಗಿ ನಡೆದಿದ್ದಳು. ಕೆಲವು ಹಾದಿಯನ್ನು ಕ್ರಮಿಸಿ ಹೋದಬಳಿಕ ಮ್ಯುನಸಿಪಾಲಟಿಯ ಒಂದು ಮಿಣುಮಿಣುಕಾದ ಲಾಂದರದ ಬೆಳಕಿನಲ್ಲಿ ಆಕೆಯ ಭಯಭೀತ ಹಾಗು ನಿಸ್ತೇಜ ಮುಖವು ಕಾಣಿಸಹತ್ತಿತು. ಅವಳು ತನ್ನ ತೊಯ್ದ ದಟ್ಟಿಯ ಸೆರಗಿನಲ್ಲಿ ಒಂದು ಚಿಕ್ಕಗಂಟನ್ನು ಸುತ್ತಿಕೊಂಡಿದ್ದಳು. ಅವಸರದಿಂದ ಅವಳು ಮತ್ತೆ ತುಸ ದಾರಿಯನ್ನು ನಡೆದು ಹೋಗುವಷ್ಟರಲ್ಲಿ ಓಣಿಯೊಳಗಿನ ಜಾರಿಕೆಯಿಂದ ಅವಳ ಕಾಲು ಜಾರಲು, ಅವಳು ದೊಪ್ಪೆಂದು ಒಮ್ಮೆಲೆ ನೆಲಕ್ಕೆ ಬಿದ್ದುಬಿಟ್ಟಳು! ಹಾ! ಇದೇನಾಯಿತು?

ಹೀಗೆ ಆಕಸ್ಮಿಕ ಬಿದ್ದದ್ದರಿಂದ ಬಾಲಿಕೆಗೆ ಅತ್ಯಂತ ದುಃಖವಾಯಿತು; ಆದರೆ ಕೆಸರಿನಿಂದ ಹೊಲಸಾದ ತನ್ನ ದಟ್ಟಿಯನ್ನು ಗದ್ದಲವಾಗದಂತೆ (ಎರಡನೆಯವರಿಗೆ ತಿಳಿಯದಹಾಗೆ) ಹೇಗೆ ತೊಳೆಯಲಿಕ್ಕೆ ಬಂದೀತೆಂಬ ವಿಚಾರದಿಂದ ಅವಳ ಕೋಮಲ ಹೃದಯಕ್ಕಾದ ದುಃಖವನ್ನು ವರ್ಣಿಸುವದು ಅಸಾಧ್ಯವೇ ಸರಿ. ಆ ಬಾಲಿಕೆಯು ಬಿದ್ದವಳು ಎದ್ದ ಕೂಡಲೆ ನಾಲ್ಕೂಕಡೆಗೆ ಹೊರಳಿ ಹೊರಳಿ ನೋಡಿದಳು. ತಾನು ಬಿದ್ದದ್ದನ್ನು ಬೇರೆ ಯಾರೂ ನೋಡಿಲ್ಲವೆಂಬದು ಆಕೆಗೆ ಖಾತ್ರಿಯಾಗಲು, ಬಿದ್ದ ಪೆಟ್ಟಿನ ದುಃಖವನ್ನು ಅವಳು ಕೂಡಲೆ ಮರೆತಳು. ಬಳಿಕ ಅವಳು ತನ್ನ ದಟ್ಟಿಯ ಸೆರಗಿನೊಳಗೆ ಸುತ್ತಿದ್ದ ಗಂಟಿಗೆ ರಾಡಿಬಡಿದು ಹೊಲಸಾಗಿದೆಯೋ ಹೇಗೆಂಬದನ್ನು ಆ ಲಾಂದರದ ಬೆಳಕಿನಲ್ಲಿ ಪರೀಕ್ಷಿಸಿ ನೋಡಿದಳು. ಆ ಗಂಟು ಹೊಲಸಾಗಿಲ್ಲವೆಂಬದು ತಿಳಿಯಲು ಆಕೆಗೆಷ್ಟೋ ಸಮಾಧಾನವೆನಿಸಿತು. ಇಷ್ಟಾದ ಮೇಲೆ ಅವಳು ಪುನಃ ದಾರೀಹಿಡಿದಳು. ಸ್ವಲ್ಪ ದೂರ ಹೋಗುವಷ್ಟರಲ್ಲಿಯೇ ಅವಳ ಮನೆಯು ಬಂದಿತು. ಆಗ ಅವಳು ಮತ್ತೆ ಸುತ್ತಮುತ್ತು ನೋಡಿ ತನ್ನ ಮನೆಯ ಪಡಸಾಲೆಯಲ್ಲಿ ಯಾರೂ ಇರುವದಿಲ್ಲೆಂಬದನ್ನು ಮನವರಿಕೆ ಮಾಡಿಕೊಂಡು ಪಡಸಾಲೆಯನ್ನು ಹೊಕ್ಕಳು. ಆ ಮನೆಯ ತಲೆಬಾಗಿಲವು ಮುಚ್ಚಲ್ಪಟ್ಟಿತ್ತು. ಅದರಿಂದ ಅವಳು ಅಲ್ಲಿಯೇ ಬದಿಯಲ್ಲಿದ್ದ ಒಂದು ಕಿಟಕಿಯ ಒಳಗೆ ಹೋಗಿ ಮೆಲ್ಲಮೆಲ್ಲನೆ—ಅವ್ವಾ, ಏ ಅವ್ವಾ; ಅಣ್ಣಾ, ಏ ಅಣ್ಣಾಪ್ಪ ಎಂದು ಒಳಗಿನವರನ್ನು ಕೂಗಹತ್ತಿದಳು.

ಎಷ್ಟೋ ಹೊತ್ತಿನ ವರೆಗೆ ಆಕೆಯ ಕೂಗಿಗೆ ಯಾರೂ ಉತ್ತರವನ್ನೇ ಕೊಡಲಿಲ್ಲ; ಬಾಗಿಲವೂ ತೆರೆಯಲ್ಪಡಲಿಲ್ಲ. ಕೆಲಹೊತ್ತಿನ ಮೇಲೆ ಆ ಕೋಣೆಯಲ್ಲಿ ಯಾರೋ ಕೆಮ್ಮುತ್ತಿರುವಂತೆ ಕೇಳಹತ್ತಿತು. ಆಗ ಆ ಹುಡುಗಿಯು ಮತ್ತೊಮ್ಮೆ ತನ್ನ ತಾಯಿಯನ್ನು ಕುರಿತು ಮೆಲ್ಲನೆ ಕೂಗಿದಳು. ನಂತರ ಆ ಕಿಟಕಿಯನ್ನು ತೆರೆದು ಒಬ್ಬ ಸ್ತ್ರೀಯು ಹೊರಗೆ ಹಣಿಕಿಹಾಕಿ—"ಯಾರು? ಚಿನ್ನೀ, ಚಿನ್ನವ್ವಾ; ಬಾ, ಮೆಲ್ಲಗೆ ಒಳಕ್ಕೆ ಬಂದು ಬಾಗಿಲಿಕ್ಕಿಕೋ" ಎಂದು ಕ್ಷೀಣಸ್ವರದಿಂದ ನುಡಿದಳು.

ಬಾಲಿಕೆಯು ಇನ್ನೊಮ್ಮೆ ಸುತ್ತಮುತ್ತು ಎಲ್ಲ ಕಡೆಗೂ ನೋಡಿ, ಶೀಘ್ರವಾಗಿ ಒಳಸೇರಿ ಬಾಗಿಲವನ್ನಿಕ್ಕಿಕೊಂಡಳು. ಆಗ ಆ ಕೋಣೆಯು ಅಂಧಕಾರಮಯವಾಗಿತ್ತು. ಬಳಿಕ ಆ ಬಾಲಿಕೆಯು ತನ್ನ ತಾಯಿಯನ್ನು ಕುರಿತು—ಅವ್ವಾ! ದೀಪ ಹಚ್ಚುವದಿಲ್ಲೇನು? ಅಣ್ಣಾನು ಬಂದನೋ? ಅಥವಾ ಇನ್ನೂ ಬಂದೇ ಇಲ್ಲವೋ? ಏನು ಮಾಡಲಿ? ಚಿಗವ್ವನು ನೋಡಿದರೆ ಇನ್ನು ಸಿಟ್ಟು ಮಾಡದೆ ಬಿಡು

ವದಿಲ್ಲ ಅವ್ವಾ, ಕಡ್ಡೀಪೆಟ್ಟಿಗೆಯಲ್ಲಿದೆ, ಕೊಡಬಾರದೇ? ದೀಪವನ್ನಾದರೂ ಹಚ್ಚುತ್ತೇನೆ; ಚಿಮಣಿಯು ಗೂಡಿನಲ್ಲಿಯೇ ಇರುವದಷ್ಟೇ? ಎಂದು ಕೇಳಿದಳು.

"ಇದೆ. ಆದರೆ ಅದರಲ್ಲಿ ಎಣ್ಣೆಯಿಲ್ಲೆಂಬಂತೆ ಕಾಣುತ್ತದೆ" ಎಂದು ಕಡ್ಡೀಪೆಟ್ಟಿಗೆಯನ್ನು ಮಗಳ ಕೈಯಲ್ಲಿ ಕೊಡುತ್ತ ತಾಯಿಯು ಅಂದಳು.

ಚಿನ್ನವ್ವ—ಅವ್ವಾ, ದಾರಿಯಲ್ಲೆಷ್ಟು ಕೆಸರಾಗಿದೆಯೆಂದೀ, ಬರುವಾಗ ನನ್ನ ಕಾಲು ಜಾರಿತು.

ತಾಯಿ—ಜಾರಿಗೀರಿ ಬಿದ್ದೆಯೇನು? ಅಂತೇ ಮಳೆಮೂರಿನಲ್ಲಿ ನಾನು ನಿನಗೆ ಹೋಗಬೇಡೆಂದದ್ದು. ಪೆಟ್ಟುಗಿಟ್ಟು ಹತ್ತಿತೇ?

ಚಿನ್ನವ್ವ—ಪೆಟ್ಟೇನಾಗಿಲ್ಲ; ಆದರೆ ದಟ್ಟಿ ಮಾತ್ರ ಅರಲಿನಿಂದ ತುಸಹೊಲಸಾಗಿದೆ. ಈಗೇನು ಮಾಡಲೇ ಅವ್ವಾ, ಚಿಗವ್ವಾ ನೋಡಿಗೀಡ್ಯಾಳು.

ತಾಯಿ—ದಟ್ಟಿಯು ಎಲ್ಲಿ ಹೊಲಸಾಗಿದೆ ತೋರಿಸು. ದೀಪ ತುಸ ದೊಡ್ಡದು ಮಾಡು, ನೋಡೋಣ.

ಚಿನ್ನವ್ವನು ದೀಪದ ಬತ್ತಿಯನ್ನು ತುಸ ಹಿರಿದಳು. ಆಗ ಆ ಕೋಣೆಯಲ್ಲಿ ಎಣ್ಣೆಯಿಲ್ಲದ ಆ ದೀಪದಿಂದ ಕುರುಡು ಕುರುಡಾದ ಬೆಳಕು ಬಿದ್ದಿತು. ಕಿಟಕಿಯ ಕೆಳಗಿನ ಒಂದು ಮುರುಕ ನವಾರಿನ ಹೊರಸಿನಮೇಲೆ ಚಿನ್ನವ್ವನ ತಾಯಿಯು—ಆಕೆಯ ಹೆಸರು ಗಂಗವ್ವ—ಬಿದ್ದುಕೊಂಡಿದ್ದಳು. ಅಲ್ಲಿ ಎದುರುಬದುರಿನ ಎರಡು ಗೂಟಗಳಿಗೆ ಒಂದು ಉದ್ದವಾದ ಹಗ್ಗವನ್ನು ಕಟ್ಟಿ ಹರಕುಬರಕಾದ ಬಟ್ಟೆ-ಬರಿಗಳನ್ನು ಒಣಗಹಾಕಿದ್ದರು. ಚಿನ್ನವ್ವನ ತಾಯಿಯು ಬಹಳ ಸೊರಗಿದ್ದಳು. ಅವಳು ತನ್ನ ಕಾಷ್ಠವತ್ ಕೈಯನ್ನು ಮುಂದುಮಾಡಿದಳು. ಚಿನ್ನವ್ವನು ತನ್ನ ದಟ್ಟಿಯನ್ನು ಅವಳಿಗೆ ತೋರಿಸುವಾಗ ಅದನ್ನು ಮುಟ್ಟಿದಕೂಡಲೆ ಗಾಬರಿಯಾದಳು. ಯಾಕೆಂದರೆ ಗಂಗವ್ವನಿಗೆ ಇಂದು ಸಂಜೆಯಮುಂದೆ ತುಸ ಚಳಿಚಳಿಯಾಗಹತ್ತಿತ್ತು. ಅದಕ್ಕಾಗಿಯೇ ಚಿನ್ನವ್ವನು ಅಂಥ ಆ ವೇಳೆಯಲ್ಲಿಯೇ ಹೋಗಿ ತಾಯಿಗೆ ಹೊದಿಯುವದಕ್ಕಾಗಿ ತಮ್ಮ ಋಣಾನುಬಂಧಿಕರಾದ ಬಸಲಿಂಗಪ್ಪನವರ ಮನೆಯಿಂದ ಒಂದು ಹಚ್ಚಡವನ್ನು ಗಂಟುಕಟ್ಟಿಕೊಂಡು ತನ್ನ ಸೀರೆಯಲ್ಲಿ ಮುಚ್ಚಿಕೊಂಡು ಬಂದಿದ್ದಳು. ಚಿನ್ನವ್ವನ ತಂದೆಯಾದ ವೀರಪ್ಪನೂ ಬಸಲಿಂಗಪ್ಪನೂ ಪರಮಮಿತ್ರರಾಗಿದ್ದರು. ಈಗೆರಡು ವರ್ಷಗಳ ಹಿಂದೆ ವೀರಪ್ಪನು ಆಕಸ್ಮಿಕವಾಗಿ ಮರಣಹೊಂದಲು, ಗಂಗವ್ವನು ತನ್ನ ಇಬ್ಬರು ಮಕ್ಕಳ—ಚಿನ್ನವ್ವ ಹಾಗು ಹೇಮಾದ್ರಿ—ಇವರನ್ನು ಕಟ್ಟಿಕೊಂಡು ತನ್ನ ಮೈದುನನ ಮನೆಗೆ ಬಂದಿದ್ದಳು. ಮೈದುನನ ಹೆಂಡತಿಯಾದ

ಸಾವಕ್ಕನು ಮಹಾದುಷ್ಟಳಿದ್ದಳು; ಆದರೂ ಅನಿವಾರ್ಯಕಕ್ಕಾಗಿ ಗಂಗವ್ವನಿಗೆ ಅವರ ಆಶ್ರಯವನ್ನೇ ಹೊಂದಬೇಕಾಯಿತು.

ಸಾವಕ್ಕನಿಗೆ ಚಿನ್ನವ್ವನಿಗಿಂತ ನಾಲ್ಕು ತಿಂಗಳಿಗೆ ಸಣ್ಣವಳಾದ ಬಸವ್ವಯೆಂಬ ವಳೊಬ್ಬ ಮಗಳಿದ್ದಳು. ಗಂಗವ್ವನು ಮೇಲೆ ಹೇಳಿದಂತೆ ತನ್ನ ನೆಗೆಣ್ಣಿಯ ಮನೆಗೆ ಬಂದಂದಿನಿಂದ ಬೆಳಗಿನ ಕಸ್ಯಾಗಸ, ಉಡುಸಾರಣಿ-ಮುಸುರಿ ಮೊದಲು ಮಾಡಿಕೊಂಡು ಮಧ್ಯಾಹ್ನ-ಸಾಯಂಕಾಲಗಳ ಅಡಿಗೆ-ನೀರು, ಬಟ್ಟೆ ಸೆಳೆಯು ವದು, ಕುಟ್ಟುವದು, ಬೀಸುವದು ಮುಂತಾದ ಎಲ್ಲ ದೇಹದಂಡನದ ಕೆಲಸಗಳನ್ನು ಅವಳೊಬ್ಬಳೇ ಮಾಡಬೇಕಾಗುತ್ತಿತ್ತು. ಪಾಪ! ಆ ಕಷ್ಟಕಾಲದಲ್ಲಿ ಆಕೆಯ ತವರುಮನೆಯವರಾರೂ ಇರದ್ದರಿಂದ ಆಕೆಯು ದೈವದಮೇಲೆ ಭಾರವನ್ನೊಗೆದು ತನ್ನ ಮೈದುನನ ಮನೆಗೆ ಬಂದು ತನ್ನ ನೆಗೆಣ್ಣಿಯ ಕಟಕಟಿಯನ್ನು ಸಹನಮಾಡ ಬೇಕಾಗಿತ್ತು!

ಸಾವಕ್ಕನ ತವರುಮನೆಯವರು ಶ್ರೀಮಂತರು. ಆದ್ದರಿಂದ ಅವಳು ಯಾವಾ ಗಲೂ ಒಳ್ಳೇ ಠಂತನದಿಂದ ನಡೆಯುತ್ತಿದ್ದಳು. ಆಕೆಯು ಸೊಕ್ಕಿನ ಹಾಗು ಉದ್ಧಟಸ್ವಭಾವದವಳಾಗಿದ್ದಳೆಂದು ಬೇರೆ ಬರೆಯಬೇಕಾಗಿಲ್ಲ. ಆಕೆಯ ಗಂಡ ನಾದ ಶಂಕರಪ್ಪನಾದರೂ ತನ್ನ ಹೆಂಡತಿಗೆ ಬಹಳ ಹೆದರಿ ನಡೆಯುತ್ತಿದ್ದನು. ಅಂದ ಮೇಲೆ ನಿರಾಶ್ರಿತಳಾದ ನಮ್ಮ ಗಂಗವ್ವನ ಪಾಡೇನು? ಗಂಗವ್ವನು ಸ್ವಾಭಾವಿಕ ವಾಗಿಯೇ ಸುಶೀಲ ಹಾಗು ಸಹನಶೀಲಳಾದ್ದರಿಂದ ಬಿದ್ದ ಕೆಲಸವನ್ನು ಮಾಡಲಿಕ್ಕೆ ಆಕೆಯು ಹಿಂದೆ-ಮುಂದೆ ನೋಡುತ್ತಿದ್ದಿಲ್ಲ. ಇನ್ನು ಆಕೆಯ ಆಧಾರ ಸರ್ವಸ್ವವು ಆಕೆಯ ಮಗನಾದ ಹೇಮಾದ್ರಿಯಾಗಿದ್ದನು. ಆತನ ಶಿಕ್ಷಣದ ವೆಚ್ಚ ಹಾಗು ಚಿನ್ನವ್ವನ ಮದುವೆಯ ಖರ್ಚಿನಭಾರ ಇವುಗಳು ತನ್ನ ಮೈದುನನಮೇಲೆಯೇ ಬೀಳ ಬೇಕಾದ್ದರಿಂದ ಗಂಗವ್ವನು ಹೆಚ್ಚಾಗಿ ಸಹನಶೀಲಳಾಗಿದ್ದಳು. ಆದರೆ ಈಚೆಗೆ ಆರು ತಿಂಗಳುಗಳಿಂದ ಈ ಅಸಹ್ಯಮನೋವಿಕಾರಗಳಿಂದ ಅವಳಿಗೆ ಕ್ಷಯರೋಗದ ಭಾವನೆಯಾದಂತಾಗಿತ್ತು. ಗಂಗವ್ವನು ಈ ದಿವಸ ಎಲ್ಲ ಮನೆಗೆಲಸಗಳನ್ನು ಬಹು ಕಷ್ಟದಿಂದ ನೀಗಿಸಿ ಮತ್ತು ಸಂಜೆಯ ಅಡಿಗೆಯನ್ನು ಕೂಡ ಮಾಡಿಟ್ಟು ಬಹಳ ಆಯಾಸವಾದ್ದರಿಂದ ತುಸ ವಿಶ್ರಾಂತಿಗಾಗಿ ತನ್ನ ಕೋಣೆಯೊಳಗೆ ಬಂದು ಕುಳಿತಿದ್ದಳು. ಇಂದು ಬೆಳಗಿನಿಂದ ಆಕಾಶವು ದಟ್ಟವಾದ ಮೇಘಗಳಿಂದ ತುಂಬಿ ಹವೆಯಲ್ಲಿ ಬಹಳ ಥಕೆಯುಂಟಾದ್ದರಿಂದ ಮೊದಲೇ ಅಶಕ್ತಳಾಗಿದ್ದ ಆಕೆಗೆ ಸಮಾ ಧಾನವೆನಿಸಲಿಲ್ಲ. ಇಡಿದಿವಸವನ್ನು ಆಕೆಯು ಹೇಗೆಹೇಗೋ ತನ್ನ ಮನೆಗೆಲಸ

ಗಳಲ್ಲಿ ಕಳೆದಳು; ಆದರೆ ಮೂರನೆಸಂಜೆಯಾದಕೂಡಲೆ ಆಕೆಗೆ ಒಳ್ಳೇ ಚಳಿ ಚಳಿ ಎನಿಸಹತ್ತಿದ್ದರಿಂದ ಅವಳು ಕೋಣೆಗೆ ಬಂದು ತನ್ನ ಮುರಕ ಮಂಚದಮೇಲೆ ಬಿದ್ದು ಕೊಂಡಳು. ಬರಬರುತ್ತ ಕ್ಷೀಣವಾಗುತ್ತ ನಡೆದಿದ್ದ ಗಂಗವ್ವನ ಸ್ಥಿತಿಯು ಸಾವಕ್ಕನಿಗೆ ತಿಳಿಯುತ್ತಿದ್ದಿಲ್ಲವೆಂತಲ್ಲ. ಆದರೆ ಆಕೆಯು ಅತ್ತಕಡೆಗೆ ಬೇಕಂತಲೇ ದುರ್ಲಕ್ಷ್ಯಮಾಡುತ್ತಿದ್ದಳು. ಶಂಕರಪ್ಪನು ಒಂದೆರಡುಸಾರೆ ತನ್ನ ಅತ್ತಿಗೆಗೆ ಔಷಧವನ್ನು ಕೊಡಿಸಬೇಕೆಂದು ವಿಚಾರಮಾಡಿದ್ದನು. ಆದರೆ ಸಾವಕ್ಕನಿಗೆ ಹಾಗೆ ಮಾಡುವದು ರುಚಿಸದ್ದರಿಂದ ಅವಳು ಗಂಡನಿಗೆ ಸಾಕುಸಾಕೆನಿಸುವಂತೆ ಕೈ ಹಚ್ಚಿದಳು!

"ಆಗಿದ್ದಾದರೂ ಏನು ಅವರಿಗೆ(ಗಂಗವ್ವನಿಗೆ)? ನಾನೇ ಎಲ್ಲ ಕೆಲಸಗಳನ್ನು ನಿಸ್ತರಿಸಿಕೊಳ್ಳುತ್ತಿರುವದರಿಂದಲೇ ಇನ್ನೂ ಚನ್ನಾಗಿದೆ; ಎಲ್ಲಿಯಾದರೂ ತುಸ ನೀಡಲಿಕ್ಕೆ ಅವರು ಬರುತ್ತಾರೆಯೋ ಇಲ್ಲವೋ ಅಷ್ಟಕ್ಕಾಗಿಯೇ ಅವರ ಬಗ್ಗೆ ಇವರ ಅಂತಃಕರಣವು ಇಷ್ಟು ಬೆಯ್ಯಹತ್ತುವದು; ಖೋಡಿಯಾದ ನಾನು ಎದ್ದಾಗಿನಿಂದ ಮಲಗುವವರೆಗೆ ಒಂದೇಸವನೆ ದುಡಿಯುತ್ತಿರುತ್ತೇನೆ; ಮತ್ತು ಈ ನನ್ನ ಚಿಕ್ಕ ಕೂಂದವ್ವ ಬಸವ್ವನು ಹಗಲೆಲ್ಲ ಅಡಿಗೆಯುಮನೆಯಲ್ಲಿಯೇ ಸುಳಿದಾಡುತ್ತಿರುತ್ತದೆ. ಈ ಬಗ್ಗೆ ನೀವು ಸ್ವಲ್ಪಾದರೂ ವಿಚಾರಮಾಡುತ್ತಿರುವಿರೇನು? ಅವರಿಗೆ ಎಲ್ಲಿ ಎರಡು ದಿವಸಗಳಿಂದ ತುಸ ಜ್ವರ ಬರಹತ್ತಿವೆಯೋ ಇಲ್ಲವೋ ಅವರ ಬಗ್ಗೆ ಎಷ್ಟೊಂದು ಚಿಂತೆಮಾಡುವದು? ಆದರೆ ಹೆಂಗಸರ ಜಡ್ಡಿನ ಅಂತಸ್ಥ ಸಂಗತಿಯ ಜ್ಞಾನವು ಗಂಡಸರಿಗೆ ಹೇಗಾಗಬೇಕು? ಮನಸ್ಸಿನಿಂದ ಕೆಲಸಮಾಡುವದಿರದಿದ್ದರೆ ಹೀಗೆಯೇ ಮರುಕಮಾಡಬೇಕಾಗುತ್ತದೆ ನೀವೇ ನೋಡಿರಿ! ಆ ಚಿನ್ನಿಯು ಇತ್ತಕಡೆಗೆ ಸ್ವಲ್ಪಾದರೂ ಹಣಕಿಹಾಕುವಳೇನು? ಅವಳೂ ಅವಳ ಅಣ್ಣನಾದ ಹೇಮಾದ್ರಿಯೂ ಯಾವಾಗಲೂ ತಮ್ಮ ಓದ-ಬರಹಗಳಲ್ಲಿಯೇ ತಲ್ಲೀನರಾಗಿರುತಾರೆ. ಅವಳು ಓದ-ಬರಹ ಕಲಿಯದಿದ್ದರೆ ಪಾಪ! ಎಲ್ಲ ಕಚೇರಿ-ಕೋರ್ಟುಗಳು ಹಾಳೇ ಬೀಳಬಹುದಲ್ಲವೇ? "

ಈ ರೀತಿಯಾಗಿ ಸಾವಕ್ಕನ ವಾಕ್ಪ್ರವಾಹವು ಒಮ್ಮೆ ಸುರುವು ಆಯಿತೆಂದರೆ, ಕೇಳುವವರಿಗೆ ತಲೆಬೇಸರಿಡುವವರೆಗೂ ಅದು ಬಂದಾಗುತ್ತಿದ್ದಿಲ್ಲ. ಬರೇ ಸಾವಕ್ಕನೇ ಗಂಗವ್ವ ಮೊದಲಾದವರನ್ನು ಇಷ್ಟು ಅಡಿಕೊಳ್ಳುತ್ತಿದ್ದಳೆಂತಲ್ಲ; ಅವಳ ಮಗಳಾದ ಆ ಚಿಕ್ಕ ಬಸವ್ವನುಕೂಡ ತಾಯಿಗಿಂತಲೂ ಅವರನ್ನು ಹೆಚ್ಚಾಗಿ ಅಡಿಕೊಳ್ಳುತ್ತಿದ್ದಳು.

ವೀರಪ್ಪನವರಿಗೆ ಸರ್ಪಪುರಿಯ ಕೋರ್ಟಿನಲ್ಲಿ ೫೦ ರೂಪಾಯಿ ಸಂಬಳದ ನೌಕರಿಯಿತ್ತು. ಅವರ ತಮ್ಮನಾದ ಶಂಕರಪ್ಪನು ಅವರ ಬಳಿಯಲ್ಲಿಯೇ ಇದ್ದು, ವಿದ್ಯೆ-ಬುದ್ಧಿಗಳನ್ನು ಕಲಿತು ದೊಡ್ಡವನಾಗಿದ್ದನು. ವೀರಪ್ಪನವರೇ ಶಂಕರಪ್ಪನ ಮದುವೆ, ನಿಬ್ಬಣ ಮೊದಲಾದ ಎಲ್ಲ ಮಂಗಲಕಾರ್ಯಗಳನ್ನು ಮಾಡಿದವರು. ಶಂಕರಪ್ಪನಿಗೆ ಶ್ರೀಮಂತ ಮಾವನು ದೊರೆತದ್ದರಿಂದ, ಮದುವೆಯಾದ ಕೆಲದಿವಸಗಳಲ್ಲಿಯೇ ಆ ಮಾವನವರು ಅಳೀದೇವರನ್ನು ತಮ್ಮಲ್ಲಿಗೇ ಇರಲಿಕ್ಕೆ ಕರೆದೊಯ್ದರು. ಶಂಕರಪ್ಪನು ಮಾವನ ಮನೆ ಸೇರಿದ ಬಳಿಕ ಅವನಿಂದ ಮುಂದಿನ ಅಭ್ಯಾಸವನ್ನು ಮಾಡುವದಾಗಲಿಲ್ಲ. ಆಗ ಅತನನ್ನು ಅತನ ಮಾವನು ತನ್ನ ಪರಿಚಯದವನಾದ ಒಬ್ಬ ಶೇಟಜಿಯ ಅಂಗಡಿಯ ಲೆಕ್ಕ-ಪತ್ರ ಬರೆಯುವ ಕೆಲಸಕ್ಕೆ ಹಚ್ಚಿದನು. ಶಂಕರಪ್ಪನು ಹೀಗೆ ನೌಕರಿಮಾಡಹತ್ತಿದಕೂಡಲೆ ಅವನು ಹೆಂಡತಿಯೊಡನೆ ತನ್ನ ಅಣ್ಣನ ಮನೆಗೆ ಬಂದು ಅವನೊಡನೆ ಅವಿಭಕ್ತನಾಗಿ-ಕೂಡಿಯೇ-ಇರಬೇಕೆಂದು ಯೋಚಿಸಿದನು. ಆದರೆ ಹುಟ್ಟಾ ಶ್ರೀಮಂತಿಕೆಯಲ್ಲಿ ಬೆಳೆದ ಅವನ ಹೆಂಡತಿಗೆ-ಸಾವಕ್ಕನಿಗೆ-ಅತ್ತೆಯ ಮನೆಯವರ ಕೈಯಲ್ಲಿ ಲೀನಳಾಗಿ ನಡೆಯುವದು ರುಚಿಸಲಿಲ್ಲ. ಆಗ ಅವಳು ಗಂಡನಿಗೆ ಹೇಳಿದ್ದೇನಂದರೆ—" ನಾವು ಅಲ್ಲಿ ಕೆಲವು ದಿನ, ಇಲ್ಲಿ ಕೆಲವು ದಿನ ಹೀಗೆಯೇ ಕಾಲಕಳೆಯ ಹತ್ತಿದರೆ, ನಮ್ಮ ಸಂಸಾರವಾಗುವದಾದರೂ ಎಂದಿಗೆ? ಈಗ ತಾವು ಹ್ಯಾಗೂ ಸ್ವತಂತ್ರ ರೀತಿಯಿಂದ ದುಡ್ಡು ಸಂಪಾದಿಸ ಹತ್ತಿರುವಿರಿ; ಇಂದಬಳಿಕ ಭಾವನವರ ಮೇಲಾದರೂ ನಾವೇಕೆ ನಮ್ಮ ಖರ್ಚಿನ ಭಾರವನ್ನು ಹೊರಿಸಬೇಕು?" ಇತ್ಯಾದಿ ಸವಿಮಾತುಗಳಿಂದ ಅವನ ಕಿವಿಯೂದಿ ಅವನನ್ನು ತನ್ನ ಒಲೆಯಲ್ಲಿ ಜಗ್ಗಿಕೊಂಡಳು. ಹೆಂಡತಿಯ ಈ ಉಪದೇಶಕ್ಕೆ ತಲೆಹಾಕಿದ ಆ ಭೋಳೇ ಸ್ವಭಾವದ ಶಂಕರಪ್ಪನು ತಾನು ಸ್ವತಂತ್ರ ಬಿಡಾರವನ್ನು ಮಾಡುವ ಕುರಿತು ಅಣ್ಣನ ಬಳಿಗೆ ಪ್ರಸ್ತಾಪವನ್ನು ತೆಗೆದನು. ತನ್ನ ಬೆನ್ನಿಲೆ ಬಿದ್ದವನೂ, ತನ್ನಿಂದಲೇ ವೃದ್ಧಿಂಗತನಾದವನೂ, ಕೇವಲ ಭೋಳೇ ಸ್ವಭಾವದವನೂ ಆದ ತನ್ನ ತಮ್ಮನು ಹೆಂಡತಿ-ಮಾವಂದಿರ ಇಚ್ಛೆಯ ಪ್ರಕಾರ ತನ್ನಿಂದ ವಿಭಕ್ತನಾಗಿರುವದು ವೀರಪ್ಪನಿಗೆ ಸಮ್ಮತವಾಗಲಿಲ್ಲ ಆದರೆ ಆ ಧೋರಣೀ ಪುರುಷನು ಭೋಳೇಸ್ವಭಾವದ ಶಂಕರಪ್ಪನ, ಕುಹಕ ಸ್ವಭಾವದ ಅತನ ಹೆಂಡತಿಯ ಹಾಗು ಅತನ ಶ್ರೀಮಂತ ಮಾವ ಮೊದಲಾದ ಪರಿವಾರದವರ ಸ್ಥಿತಿ-ಗತಿಗಳನ್ನು ಲಕ್ಷ್ಯದಲ್ಲಿ ತಂದು ಮುಂದೆ ಬಡಿದಾಡಿ ವಿಭಕ್ತರಾಗುವದಕ್ಕಿಂತ, ಈಗಲೇ ಆಗುವದು ಲೇಸೆಂದು ಬಗೆದು ಹಾಗೇ ಆಗಲೆಂದು ತಮ್ಮನ ಆಲೋಚನೆಗೆ ಬಹು ಕಷ್ಟದಿಂದ ಒಪ್ಪಿದನು.

ಹೀಗೆ ಆ ಅಣ್ಣ-ತಮ್ಮಂದಿರು ಸುವಿಚಾರದಿಂದ ವಿಭಕ್ತರಾಗಿರಹತ್ತಿದ್ದನ್ನು ನೋಡಿ ನಗರವಾಸಿಗಳಿಗೆ ಬಹು ಸಂತೋಷವೆನಿಸಿತು. ಇಲ್ಲದಿದ್ದರೆ ಈಗಿನ ಮನ್ವಂತರದಲ್ಲಿ ಸ್ವಲ್ಪಾದರೂ ಬಡಿದಾಟವಿಲ್ಲದೆ ಅಣ್ಣ-ತಮ್ಮಂದಿರ ಹಿಸೆಗಳಾಗಿ ಅವರು ಸುಖದಿಂದಿದ್ದಾರೆಂದು ಬಗೆಯುವಂತೆಯೇ ಇರುವದಿಲ್ಲ. ಶಂಕರಪ್ಪನು ವಿಭಕ್ತನಾಗಿದ್ದರೂ ಆಗಾಗ್ಗೆ ಅಣ್ಣನ ಮನೆಗೆ ಬರುತ್ತ ಹೋಗುತ್ತಲಿರುತ್ತಿದ್ದನು. ವೀರಪ್ಪನವರಾದರೂ ಕಾರಣಪರತ್ವದಿಂದ ಶಂಕರಪ್ಪನನ್ನೂ ಅವನ ಮಡದಿಯನ್ನೂ ತಮ್ಮಲ್ಲಿಗೆ ಕರೆಸಿಕೊಳ್ಳುತ್ತಲೂ, ತಾವು ಅವರ ಮನೆಗೆ ಹೋಗುತ್ತಲೂ, ನೋಡುವವರಿಗೆ ಒಳ್ಳೇ ಸಂತೋಷವುಂಟಾಗುವ ರೀತಿಯಲ್ಲಿ ತಮ್ಮನೊಡನೆ ವ್ಯವಹರಿಸುತ್ತಿದ್ದರು. ಆ ಅಣ್ಣ-ತಮ್ಮಂದಿರು ಪರಸ್ಪರರ ವಿಷಯವಾಗಿ ಎಂದೂ ವ್ಯಗ್ರಚಿತ್ತರಾಗಲಿಲ್ಲ!

ಹೀಗಿರಲು, ಪತಿಯ ಆಕಸ್ಮಿಕ ಮರಣದ ಸಲುವಾಗಿ ಮೇಲೆ ಹೇಳಿದಂತೆ ಗಂಗವ್ವನು ಮೈದುನನ್ನೇ ಆಶ್ರಯಿಸಬೇಕಾಯಿತು. ಸಾವಕ್ಕನು ಇಷ್ಟು ನಿಷ್ಠುರಳಿರಬಹುದೆಂದು ಆಕೆಯ ಸ್ವಭಾವದ ದೃಢಪರಿಚಯವಿಲ್ಲದ, ಗಂಗವ್ವನಿಗೆ ಈ ಮೊದಲು ತಿಳಿದಿರಲಿಲ್ಲ. ಯಾವದೊಂದು ವ್ಯಕ್ತಿಯ ಹುಟ್ಟುಗುಣಗಳು ಹೊರಬೀಳಬೇಕಾದರೆ, ಆ ವ್ಯಕ್ತಿಯು ಸ್ವತಃ ಅನನ್ಯಗತಿಕವಾಗಿ ಎರಡನೆಯವರನ್ನು ಆಶ್ರಯಿಸುವದಕ್ಕಿಂತ, ಅದನ್ನೇ ಬೇರೊಬ್ಬ ಅನಾಥ ವ್ಯಕ್ತಿಯು ಆಶ್ರಯಿಸಬೇಕಾಗುವದು. ಅಂದರೆ ಮೊದಲನೆಯ ವ್ಯಕ್ತಿಯ ಹುರುಡೆಲ್ಲ ಒಮ್ಮೆಲೆ ನಿದರ್ಶನಕ್ಕೆ ಬರುವದು ಸಿದ್ಧಾಂತವು. ಈ ಸಿದ್ಧಾಂತಕ್ಕನುಸರಿಸಿ ಗಂಗವ್ವನಿಗೆ ಸಾವಕ್ಕನ ಸ್ವಭಾವಪರಿಚಯವು ದಿನೇದಿನೇ ಚನ್ನಾಗಿ ಆಗಹತ್ತಿತು. ಗಂಗವ್ವನು ಅನಾಥಳಾಗಿ ತಮ್ಮ ಆಶ್ರಯಕ್ಕೆ ಬಂದಿದ್ದರೂ ಅವಳು ಮನೆತನದ ಹಿರಿಯಹೆಣ್ಣುಮಗಳೂ, ತನ್ನ ಗಂಡನನ್ನು ಚಿಕ್ಕಂದಿನಿಂದ ಉಣಿಸಿ ತಿನಿಸಿ ಸಲುಹಿದವಳೂ ಆದದ್ದರಿಂದ ಅವಳನ್ನು ಸಾವಕ್ಕನು ಒಳ್ಳೇ ಗೌರವದಿಂದ ನಡೆಸಿಕೊಳ್ಳಬಹುದಾಗಿತ್ತು; ಆದರೆ ಅಷ್ಟೊಂದು ತಿಳಿದು ನಡೆಯುವಷ್ಟು ಸೌಜನ್ಯವೂ, ಸುಶೀಲವೂ, ಆಕೆಯಲ್ಲಿ ಎಲ್ಲಿಂದ ಬರಬೇಕು? ತನ್ನ ತವರುಮನೆಯ ಶ್ರೀಮಂತಿಕೆಯ ಅಬ್ಬರದ ಸೊಕ್ಕಿನಿಂದ ಸೆಟೆಯುವ ಆ ಸಟವಿಯು ಗಂಗವ್ವನನ್ನು ತನ್ನ ಹಿರಿಯ ನೆಗೆಣ್ಣಿಯೆಂದು ಭಾವಿಸಿಯೇ ಇದ್ದಿಲ್ಲ. ಮನೆಗೆಲಸ ಮಾಡುವ ಸಲುವಾಗಿ ತಮ್ಮಲ್ಲಿಟ್ಟುಕೊಂಡ ಯಾವಳೊಬ್ಬ ದಾಸಿಯೆಂದೇ ಗಂಗವ್ವನನ್ನು ಅವಳು ತಿಳಿದದ್ದರಿಂದ, ತಮ್ಮ ಮನಸಿಗೆ ಬಾರದ ಚಾಕರಬಾಯಿಯೊಡನೆ ತೀರ ಕಠೋರವಾಗಿ ನಡಕೊಳ್ಳುವಂತೆ ಗಂಗವ್ವನ ಕೂಡ ಆಕೆಯು ನಡಕೊಳ್ಳುತ್ತಿದ್ದಳು. ಇರಲಿ.

ಚಿನ್ನವ್ವನು ಬತ್ತಿ ಎಳೆದು ದೀಪವನ್ನು ಥಾಳಾಗಿ ಮಾಡಿದ ಕೂಡಲೆ ಕೆಸರಿನಿಂದ ಮುಳುಗಿದ ಆಕೆಯು ದಟ್ಟಿಯು ಗಂಗವ್ವನಿಗೆ ಕಂಡಿತು. ಆಗ ಅವಳು—“ಚಿನ್ನೀ, ಇಕೋ ಇತ್ತ ನೋಡು, ನನ್ನ ಹಾಸಿಗೆಯಲ್ಲಿ ನನ್ನ ಹಳೇ ಸೀರಿಯದೆ. ಅದನ್ನು ತಕ್ಕೊಂಡು ಉಟ್ಟುಕೋ. ಬಿಟ್ಟುಬಿಡು ನೋಡೋಣ, ಈ ತೊಯ್ದ ದಟ್ಟಿಯನ್ನು. ಚಿನ್ನವ್ವಾ, ಇನ್ನು ನಿನ್ನ ಚಿಗಪ್ಪನು ಬರಬಹುದು. ಅವರಿಗೆ ಊಟಕ್ಕೆ ನೀಡುವದಕ್ಕಾಗಿ ನೀನು ಇಲ್ಲೇ ಇರವ್ವಾ! ನಾನಿನ್ನೇಳಲಾರೆನು. ಹೋಗು, ಬೇಗ ಹೋಗಿ ನೀಡುವಸಿದ್ಧತೆ ಮಾಡಿಡು. ಆದರೆ ತಂಗೀ, ನೀನು ತಂದಿರುವ ಆ ಹಚ್ಚಡವನ್ನಷ್ಟು ನನಗೆ ಮೊದಲು ಹೊಚ್ಚಿ ಹೋಗವ್ವಾ” ಎಂದು ಮಗಳನ್ನು ಕುರಿತು ಹೇಳಿದಳು.

ಚಿನ್ನವ್ವನು ತಾಯಿಗೆ ಹಚ್ಚಡವನ್ನು ಹೊಚ್ಚಹೋದಳು. ಆಗ ಅವಳ ಕೈಯು ತಾಯಿಯ ಮೈಗೆ ಸ್ಪರ್ಶವಾಗಲು, ಆ ತೀಕ್ಷ್ಣವಾದ ಜ್ವರದ ಉರಿಯನ್ನು ಅದು ಸಹಿಸದಾಯಿತು. ತನ್ನ ತಾಯಿಗೆ ಈ ಪರಿ ಕ್ಷಣಕ್ಷಣಕ್ಕೆ ಜ್ವರದ ತಾಪವು ಹೆಚ್ಚಾಗುವದನ್ನು ಅರಿತು—“ಅವಳು ಅವ್ವಾ, ನಿನಗೆಷ್ಟು ಜ್ವರಬಂದಿವೆಯಲ್ಲ!” ಎಂದು ಕೇಳಿದಳು.

ಗಂಗವ್ವ—ಹೌದವ್ವಾ ಮಗಳೇ, ನನಗೀಗ ಮತ್ತೂ ಹೆಚ್ಚು ಚಳಿಯಾಗ ಹತ್ತಿರುತ್ತದೆ. ಹೀಗೆ ಆ ತಾಯಿ-ಮಕ್ಕಳು ಆ ಕೋಣೆಯಲ್ಲಿ ಪರಸ್ಪರರ ದುಃಖವನ್ನು ಕುರಿತು ತುಸಹೊತ್ತು ಮಾತಾಡುತ್ತಿರುವಷ್ಟರಲ್ಲಿ ಹೊರಗೆ ನಡುಮನೆಯಲ್ಲಿ ಸಾವಕ್ಕನು ಏನೇನೋ ಗದ್ದರಿಸಿ ಮಾತಾಡಹತ್ತಿದ್ದಳು.



# [ ೨ ]

ಹೇಮಪ್ಪನವರೇ, ಎಲ್ಲಿಗೆ ಹೋಗೋಣಾಗಿತ್ತು? ಹೊತ್ತುಮುಣಗಿ ರಾತ್ರಿ ಎಂಟು ಬಡೆದರೂ ಈಚೆಗೆ ತಮ್ಮ ಸಾಲಿ ಬಿಡುವದಿಲ್ಲೆಂದು ಕಾಣುತ್ತದೆ. ಭಲೆ! ಮನಸಿಗೆ ಬಂದಹಾಗೆ ನೀನು ಮಾಡುತ್ತಿರುವೆಯಾ? ನಿನಗಾರೂ ಹೇಳಿ ಕೇಳಿ ಸಿಟ್ಟು ಮಾಡುವವರು ಇದ್ದಂತೆ ತೋರುವದಿಲ್ಲ; ಒಮ್ಮೆಯಾಯಿತು, ಎರಡುಸಾರೆಯಾಯಿತು; ಎಷ್ಟೋಸಾರೆಯಾಯಿತು; ಹೇಳುವವರಾದರೂ ಎಷ್ಟುಸಾರೆ ಹೇಳುವರು? ಎಚ್ಚರಿಕೆ! ಬಲು ಎಚ್ಚರಿಕೆ!! ಮತ್ತೆ ಹೀಗಾಯಿತೆಂದರೆ......ಎಂದು ಸಾವಕ್ಕನು ಗದ್ದರಿಸಿ ನುಡಿಯುತ್ತಿರಲು, ಧಡ್‌ಧಡ್ ಎಂದು ಅಟ್ಟದ ಪಾವಟಿಗೆಯ ಸಪ್ಪಳವಾಗ ಹತ್ತಿತು. ಹೀಗೆ ಒತ್ತರದಿಂದ ಮೇಲಂತಸ್ತಿನಿಂದ ಇಳಿದು ಬರುವವರಾರೆಂದು ಚಿಗವ್ವನ ಕೂಗಾಟದಿಂದ ಮೊದಲೇ ಬೆದರಿದ್ದ ಹೇಮಾದ್ರಿಯು ಮತ್ತಿಷ್ಟು ಅಂಜಿಕೆಯಿಂದ ಅತ್ತ ನೋಡುತ್ತಿರಲು, ಬಸವ್ವನು ಅಟ್ಟದಿಂದ ಇಳಿಇಳಿಯುತ್ತಲೆ ದೊಡ್ಡ ದನಿಯಿಂದ—ಅವ್ವಾ! ಏ ಅವ್ವಾ! ಕೇಳು; ನಾನು ಹೇಳುವ ಮಾತನ್ನು ಮೊದಲು ಕೇಳಿ, ಆ ಮೇಲೆ ಅವನಿಗೆ ನೀನು ಅನ್ನತಕ್ಕದ್ದನ್ನು ಅನ್ನು; ಹೇಮಾದ್ರಿಯು ಬಂದೊಡನೆ ಅವನಿಂದ ಆ ಸ್ಟೂಲನ್ನು ಮೇಲಿಡಿಸುತ್ತೇನೆಂದು ನೀನು ಇಂದು ಮಧ್ಯಾಹ್ನದಲ್ಲಿ ಅಂದಿದ್ದಿಲ್ಲವೆ? ಹಾಗಾದರೆ ಈಗ ಅವನಿಗೆ ಹೇಳಿ ಅದನ್ನು ಮೊದಲು ಮೇಲಿಡಿಸು ನೋಡುವಾ! ಎಂದು ತಾಯಿಗೆ ಅಪ್ಪಣೆಮಾಡಿದಳು.

ಸಾವಕ್ಕ—"ಹೌದು, ಒಳ್ಳೇ ನೆನಪು ಕೊಟ್ಟೆ" ಎಂದು ತುಸ ಶಾಂತಳಾದಂತೆ ತೋರಿಸಿ, ಹೇಮಾದ್ರಿಯನ್ನು ಕುರಿತು—ಹೇಮಾ, ಹೋಗು ನಿಮ್ಮವ್ವನ ಕೋಣೆಯೊಳಗಿರುವ ಆ ಸ್ಟೂಲನ್ನು ಅಟ್ಟದ ಮೇಲೆ ಒಯ್ದು ಇಡು; ಅದಕ್ಕಾಗಿ ಬೆಳಗಿನಿಂದ ಬಸವ್ವನು ನಿನ್ನ ಹಾದಿಯನ್ನೇ ಕಾಯುತ್ತಿದ್ದಾಳೆ.

ತಾಯಿಯು ಹೇಮಾದ್ರಿಗೆ ಹೀಗೆ ಹುಕುಮು ಮಾಡಿದೊಡನೆಯೇ ಬಸವ್ವನು ಗಂಗಮ್ಮನ ಕೋಣೆಗೆ ಹೋಗಿ ಸುಮ್ಮನೆ ಮುಂದಕ್ಕೆ ಮಾಡಿದ್ದ ಬಾಗಿಲವನ್ನು ಧಡಲ್ಲೆಂದು ಹಿಂದೂಡಿ ಗಂಗಮ್ಮನನ್ನು ಕುರಿತು—"ದೊಡ್ಡವ್ವಾ ಏ ದೊಡ್ಡವ್ವಾ, ಈಗಾಗಲೇ ಮಲಗಿಬಿಟ್ಟೆಯೇನು? ನಡಿ ಏಳು; ಬಹಳ ಹೊಟ್ಟೆ ಹಸಿದದೆ; ನನಗೆ ಮೊದಲು ನೀಡು; ಅಪ್ಪನು ಬರುವವರೆಗೆ ಈ ದಿನ ನಾನು ತಡೆಯುವವ

ಳಲ್ಲ; ಏಳು, ಬೇಗನೆ ಏಳುವಿಯೋ ಇಲ್ಲವೋ? ಅಲಲ! ಇದೇನು? ಚಿನ್ನವ್ವನವರು ದೊಡ್ಡ ಸೀರೆಯನ್ನುಡುತ್ತಿರುವರಲ್ಲ!! " ಎಂದವಳೇ ಚಿನ್ನವ್ವನು ನೀರಿಗೆಯನ್ನಿಕ್ಕುತ್ತಿರಲು, ಬಸವ್ವನು ಅವಳ ಕೈಯೊಳಗಿನ ಆ ನೀರಿಗೆಯನ್ನು ಕಸಿದೊಗೆದು ಅವಳನ್ನು ಹಿಡಿದೆಳೆಯುತ್ತ ನಡುಮನೆಗೆ ಜಗ್ಗಿಕೊಂಡು ಬಂದು ತನ್ನ ತಾಯಿಯನ್ನು ಕುರಿತು—" ಅವ್ವಾ, ಇತ್ತ ನೋಡು; ಚಿನ್ನವ್ವನವರ ವೇಷವನ್ನು!" ಎಂದು ಆಕ್ರೋಶದಿಂದ ಒದರಿದಳು.

ಆಗ ಸಾವಕ್ಕನು ಚಿನ್ನವ್ವನ ಕಡೆಗೆ ಹೊರಳಿ ಮಗಳಿಗಿಂತ ಹೆಚ್ಚು ಆಕ್ರೋಶದಿಂದ—" ಏನೇ ಚಿನ್ನೀ, ಹಗಲೆಲ್ಲ ಸೀರಿ-ದಟ್ಟಿಗಳನ್ನುಡುತ್ತ ಕಾಲಕಳೆಯುವೆಯಲ್ಲ? ನಿನಗೆ ಕೆಲಸಬೊಗಸೆಗಳಿಲ್ಲೇನು? ಇತ್ತೀಚಿಗೆ ನೀನು ಬಹಳ ಸೊಕ್ಕಿಗೆ ಬಂದಿರುತ್ತೀಯೆ" ಎಂದು ಸಿಟ್ಟುಮಾಡಿದಳು.

ಇಷ್ಟರೊಳಗೆ ಹೇಮನು ಕೋಣೆಯೊಳಗಿನ ಸ್ಟೂಲನ್ನು ಹೊರಗೆ ತಂದನು. ಅದನ್ನು ಕಂಡು ಬಸವ್ವನು ಒಳ್ಳೇ ಹರುಷದಿಂದ ಕುಣಿದಾಡುತ್ತ "ತರಿಸಿದೆನು. ನಿನ್ನಿಂದ ಈ ಸ್ಟೂಲನ್ನು ಹ್ಯಾಗೆ ತರಿಸಿದೆನು? ನೀನು ನನ್ನ ಮಾತು ಕೇಳುವದಿಲ್ಲ ಎಂದು ಅಂದಿದ್ದೆಯಲ್ಲವೆ?" ಎಂದು ಹೇಮಾದ್ರಿಯ ಅಂತಃಕರಣಕ್ಕೆ ನಡುವಂತೆ ಹಂಗಿಸುತ್ತ ಆ ಅಷ್ಟದ ಹತ್ತುವರ್ಷದ ಟೊಣಪ ಕೂಸು ಸೆರೆಕುಡಿದ ಮಂಗನಂತೆ ಕುಣಿದಾಡ ಹತ್ತಿತು. ಹೀಗೆ ಆ ಹುಡುಗಿಯು ಅಕಾಂಡ-ತಾಂಡವಾಗಿ ಕುಣಿಯುತ್ತಿರಲು, ಆಕೆಯ ದಕ್ಕೆಯು ಆ ಸ್ಟೂಲಿಗೆ ಬಡಿಯಲು ಅದು ಹೇಮಾದ್ರಿಯ ಕೈಯೊಳಗಿಂದ ಜಾರಿ ಅದರ ಒಂದು ಏಣು ಅವನ ಕಾಲ ಹೆಬ್ಬೊಟ್ಟಿನ ಮೇಲೆ ಬಿದ್ದಿತು. ಕೂಡಲೆ ಅದು ಜೆಬ್ಬಿಯಾಗಿ ಅದರೊಳಗಿಂದ ಕಾರಂಜಿಯಂತೆ ನೆತ್ತರವು ಪುಟಿಯತೊಡಗಿತು. ಆ ಭಯಂಕರ ನೋವಿನಿಂದ ಹೇಮನು ಚಿಟ್ಟನೆ ಚೀರಿದನು. ಮಗನ ಆ ಆರ್ತಧ್ವನಿಯು ಕೋಣೆಯೊಳಗೆ ಬಿದ್ದುಕೊಂಡಿದ್ದ ಗಂಗಮ್ಮನ ಕರ್ಣರಂಧ್ರವನ್ನು ಪ್ರವೇಶಿಸಿತು. ಆ ಆರ್ತಧ್ವನಿಯು ಹಾಲಾಹಲ ವಿಷದಂತೆ ಅವಳ ಕಿವಿಗಳನ್ನೂ ಹೃದಯವನ್ನೂ ಸುಡಹತ್ತಿತ್ತು. ಅದನ್ನು ಕೇಳಿ ಆ ದಿಕ್ಕಿಲ್ಲದ ಅಶಕ್ತ ಮಾತೆಗೆ ಆಗ ಏನನಿಸಿದ್ದೀತೆಂಬದನ್ನು ಸಹೃದಯರಾದ ನಮ್ಮ ವಾಚಕರೇ ತರ್ಕಿಸಬಹುದು. ಅಣ್ಣನ ಆ ಚೀರಾಟವನ್ನು ಕೇಳಿ ಚಿನ್ನವ್ವನು ಓಡುತ್ತ ಬಂದು ಅಣ್ಣನ ಕಾಲಿನ ರಕ್ತವನ್ನು ಒರಿಸಿ ತಣ್ಣೀರಿನ ಪಟ್ಟಿಯನ್ನು ನೋವಾದ ಸ್ಥಳಕ್ಕೆ ಸುತ್ತಹತ್ತಿದಳು. ಆದರೆ ಇದು ಆ ದುಃಸ್ವಭಾವದ ಸಾವಕ್ಕನಿಗೆ ಸಹನವಾಗಲಿಲ್ಲ.

"ಅಹಹ! ಚಿನ್ನೀ, ಹೇಮನಿಗಿಂತ ನಿನಗೇ ಹೆಚ್ಚು ಪೆಟ್ಟು ಬಡಿದಿದೆಯೆಂಬಂತೆ ತೋರುತ್ತದಲ್ಲ? ಜಗತ್ತಿನೊಳಗೆ ಬೇರೆ ಯಾರಾದರೂ ಅಣ್ಣ-ತಮ್ಮಂದಿರು, ಅಕ್ಕ-ತಂಗೆಯರು ಇದ್ದಾರೆಯೋ ಇಲ್ಲವೋ? ಇದ್ದರೂ ಅವರಲ್ಲಿ ನಿನ್ನಷ್ಟು ಅಂತಃಕರಣ ಇರಲಿಕ್ಕಿಲ್ಲ ನೋಡು. ಚಿನ್ನೀ! ಏಳು, ಮಾನಗೇಡೀ, ಕೈಗೆಲಸಬಿಟ್ಟು ಇಲ್ಲದ ಮುರಕ ಮಾಡಬರಬೇಡ" ಎಂದವಳೇ ಸಾವಕ್ಕನು ಚಿನ್ನಿಗೆ ಸಿಟ್ಟುಮಾಡಿ ಅವಳನ್ನು ಅಲ್ಲಿಂದ ಎಳೆದೊಯ್ಯಬೇಕೆನ್ನುತ್ತಿರುವಷ್ಟರಲ್ಲಿ ಆ ಸೂಕ್ಷ್ಮ ವಿಚಾರದ ಚಿನ್ನವ್ವನು ಅಷ್ಟರಲ್ಲಿ ಅಣ್ಣನ ಬೊಟ್ಟಿಗೊಮ್ಮೆ ತಣ್ಣೀರಿನ ಪಟ್ಟಿಸುತ್ತಿಬಿಟ್ಟು ತಾನೇ ಅಲ್ಲಿಂದೆದ್ದು ಅಡಿಗೆಮನೆಯ ಕಡೆಗೆ ನಡೆದಳು. ಹೀಗೆ ಚಿನ್ನವ್ವನು ತನ್ನ ಕೆಲಸ ತೀರಿಸಿ ಅಲ್ಲಿಂದ ಎದ್ದು ಹೋದ ಮೇಲೆ ಸಾವಕ್ಕನ ಬಾಯಿಯೆಂಬ ತೋಫಿನ ಗುರಿಯು ಹೇಮಾದ್ರಿಯ ಕಡೆಗೇ ಹೊರಳಿತು. ಆಗ ಆವಳು "ಎಲಾ ಆದದ್ದಾದರೂ ಏನು ನಿನಗಿಷ್ಟು ಚೀರಾಡಲಿಕ್ಕೆ? ಕತ್ತೆಯಂತೆ ಇಷ್ಟು ದೊಡ್ಡ ಟೊಣಪನಾಗಿದ್ದಿಯೆ. ಹೀಗಿದ್ದು ನಿನ್ನಿಂದ ಈ ಸಣ್ಣ ಸ್ಟೂಲು ಎತ್ತುವದಾಗಲಿಲ್ಲವೆ? ಹಿಡಿ, ಎತ್ತು, ಅವ್ವಾಳಿಯ ಹಾಗೆ ನನ್ನ ಮೊಸಡಿಯನ್ನೇನು ನೋಡುತ್ತ ನಿಂತಿರುವೆ. ಎಂಟು-ಒಂಬತ್ತು ಗಂಟೆ ರಾತ್ರಿಯವರೆಗೆ ಕಂಡಕಂಡಲ್ಲಿ ಊರೊಳಗೆ ಅಂಡಲೆಯಲಿಕ್ಕೆ ನಿನಗೆ ಕೊಂಚವೂ ನಾಚಿಕೆ ಬರುವದಿಲ್ಲವೆ? ಮನೆಯೊಳಗೆ ನಿಮಗೆ ಯಾರ ಹೆದರಿಕೆಯೂ ಇಲ್ಲದಾಗಿದೆ. ಕುಣಿಯಿರಿ, ಮನಬಂದ ಹಾಗೆ ಕುಣಿಯಿರಿ!" ಎಂದು ದೊಡ್ಡ ದನಿಯಿಂದ ಒದರಾಡುತ್ತಲೂ, ಆಗಾಗ್ಗೆ ಹೇಮಾದ್ರಿಯ ಗಲ್ಲಹಿಂಡಿ ಅವನನ್ನು ಹೊಡೆಯಹೋಗುತ್ತಲೂ ಸಾವಕ್ಕನ ವಾಕ್‌ಪ್ರವಾಹವು ಮನೆಯಲ್ಲಿ ಒತ್ತರದಿಂದ ನಡೆದಿರಲು, ಮನೆಯನ್ನು ಪ್ರವೇಶಿಸುತ್ತ " ಕುಣಿಯಿರಿ, ಯಾರು ಬೇಕಾದ ಹಾಗೆ ಕುಣಿಯಿರಿ ಎಂದು ಯಾರಿಗೆ ಅಂದೆ?" ಎಂದು ಶಂಕರಪ್ಪನು ಕೇಳಿದನು.

ಅಸ್ತ-ವ್ಯಸ್ತವಾದ ಪೋಷಾಕು, ಮುಖದ ಮೇಲಿನ ಕುಚುಷ್ಟ ಲಕ್ಷಣ, ಜೋಲಿ ಹೊಡೆಯುತ್ತ ಬರುತ್ತಿರುವ ನಡಿಗೆ ಇವುಗಳ ಮೇಲಿಂದ ನೋಡಿದರೆ ಶಂಕರಪ್ಪನವರ ಸ್ವಾರಿಗೆ ಸ್ವಲ್ಪವೂ ದೇಹಭಾನವಿರಲಿಲ್ಲೆಂಬದು ಕೂಡಲೆ ಕಂಡು ಬರುವಂತಿತ್ತು. ಆಗ ಸಾವಕ್ಕನು ತನ್ನ ಗಂಡನ ಮುಖದ ಕಡೆಗೆ ಒಮ್ಮೆ ನೋಡಿದವಳೇ—"ಮತ್ತಾರು ಇಲ್ಲಿ ಕುಣಿಯುವವರು? ಈ ನಿಮ್ಮ ಪ್ರೀತಿಯ ಮಗ ಹೇಮನು. ಮತ್ತಾರಿರಬೇಕು? ಕುಣಿಯಿರಿ.........ಮಕ್ಕಳೇ. ಬೇಕಾದ ಹಾಗೆ ಕುಣಿಯಿರಿ. ನನ್ನ ಜೀವಕ್ಕೆ ಸಾಕುಸಾಕಾಗಿದೆ." ಎಂದು ಮತ್ತ ನುಡಿದಳು.

"ಏ......ಎಲ-ಎಲ!! ಈ...ಈ...ರ-ರ-ರಕ್ತವೆ........ಲ್ಲಿಯದು!" ಎಂಬ ಶಂಕರಪ್ಪನ ಪ್ರಶ್ನೆಗೆ

"ಇಲ್ಲೆಲ್ಲಿ ರಕ್ತವದೆ! ಇಲ್ಲೆಲ್ಲಿಯೂ ರಕ್ತ-ಗಿಕ್ತಗಳಿರುವದಿಲ್ಲ ಎಲಾ ಹೇಮಾ, ಕೆಳಗೇನು ನೋಡುತ್ತೀ. ನಿನ್ನ ಮುಸುಡೀ ಕರ್ರಗೆ ಮಾಡು ಇಲ್ಲಿಂದ" ಎಂದು ಚಿಗವ್ವನು ಚೀರಲು, ಹೌಹಾರಿದ ಹೇಮಾದ್ರಿಯು ಮೆಲ್ಲನೆ ಅಲ್ಲಿಂದ ಕಾಲ್ದೆಗೆಯು ಹತ್ತಿದನು.

"ನಿ...ನಿಲ್ಲು. ಹೇ...ಮಾ...ಕುಸ...ನಿ...ಲ್ಲು. ಹೋಗ...ಬೇಡ" ಎಂದು ಶಂಕರಪ್ಪನು ಅವನನ್ನು ಅಡ್ಡಗಟ್ಟಿ ನಿಲ್ಲಿಸಹೋಗಲು,

ಸಾವಕ್ಕನ ರೌದ್ರಮೂರ್ತಿಯು ಶಂಕರಪ್ಪನ ಹತ್ತರಕ್ಕೆ ಬಂದು—"ಆತನನ್ನು ಇಲ್ಲಿಂದ ಕಳಿಸುವಿರೋ ನಾನೇ ಹೊರಟು ಹೋಗಲೋ?" ಎಂದು ಕಟ್ಟುಸಿಟ್ಟಾಗಿ ನುಡಿಯಿತು

"ನೀ-ನೀನು ನಡುವೆ ಮಾತಾಡಬೇಡ" ಎಂದು ಶಂಕರಪ್ಪನು ಸಾವಕ್ಕನಿಗೆ ಅನ್ನಲು,

ಆಗ ಆಕೆಯು ಸಿಟ್ಟುಬೆಂಕಿಯಾಗಿ ಹಲ್ಲುಕಡಿಯುತ್ತ—"ಏನಂದಿರಿ, ನಾನು ಮಾತಾಡಬೇಡವೇ? ಯಾಕೆ? ನಾನು ಮಾತಾಡತಕ್ಕವಳೇ; ಈ ಮನೆಗೆ ನಾನು ಯಾರೂ ಅಲ್ಲವೇನು? ನೀವು ಬೇಕಾದಹಾಗೆ ಕುಣಿದೀರಿ; ಆದರೆ ಖಂಡಿತವಾಗಿ ತಿಳಿಸುತ್ತೇನೆ, ನಾನು ಆ ನಿಮ್ಮ ಕುಣಿದಾಟವನ್ನು ಎಂದಿಗೂ ನಡೆಯುಗೊಡತಕ್ಕವಳಲ್ಲ! ಮತ್ತೆ ನನಗೇ ಅನ್ನುತ್ತಾರೆ, ಮಾತಾಡಬೇಡವೆಂದು! ನಾನು ಮಾತಾಡದಿದ್ದರೆ ಮತ್ತಾರು ಇಲ್ಲಿ ನಿಮಗೆ ಮಾತಾಡುವವರು? ನಾಲ್ಕುಗಂಟೆಗೆ ಸಾಲೆ ಬಿಡುತ್ತಿದ್ದು ಈ ಟೊಣಪನು ಇದೀಗ ಮನೆಗೆ ಬರುತ್ತಲಿದ್ದಾನೆ; ಇವನಿಗೆ ಹೇಳಕೇಳುವವರಾರೂ ಇಲ್ಲವೇಇಲ್ಲವೇನು?" ಎಂದು ನುಡಿದಳು.

"ಹೀಗಂದರೇನು? ಎಲಾ ಹೇಮಾ, ಹೀಗಂದರೇನು?" ಎಂದು ಶಂಕರಪ್ಪನು ನನ್ನ ಅಣ್ಣನ ಮಗನ ಕಡೆಗೆ ನೋಡುತ್ತ ನುಡಿದನು.

ಹೇಮಾದ್ರಿ—"ಶಾಲೆ ಬಿಟ್ಟ ಹೊತ್ತಿನಿಂದ ಈವರೆಗೆ ನಾನು ಒಬ್ಬ ಹುಡುಗನ ಮನೆಯಲ್ಲಿ ಅಭ್ಯಾಸಮಾಡುತ್ತ ಕುಳಿತಿದ್ದೆನು."

"ಹೀಗೇನು? ಅಭ್ಯಾಸಮಾಡಲಿಕ್ಕೆ ನಿಮಗೆ ಮನೆಯಲ್ಲಿ ಸ್ಥಳವಿರುವದಿಲ್ಲಲ್ಲವೇ?" ಹೀಗೆಂದು ನಡುವೇ ಬಾಯಿಹಾಕಿ ಸಾವಕ್ಕನು ಒದರಿ ಕೇಳಿದಳು.

ಇನ್ನು ಮಾತಾಡಬೇಕೋ ಬಾರದೋ ಎಂಬ ಬಗ್ಗೆ ತುಸಹೊತ್ತು ವಿಚಾರ ಮಾಡಿ, ಹೇಮಾದ್ರಿಯು—"ನನ್ನ ಹತ್ತಿರ ಪುಸ್ತಕಗಳಿದ್ದಿಲ್ಲವೆಂದು ನಾನು ಆ ಹುಡುಗನ ಮನೆಗೆ ಹೋಗಿದ್ದೆನು. ನನ್ನ ಅಭ್ಯಾಸವು ಮುಗಿದು ಕೆಲಹೊತ್ತಾಗಿತ್ತು. ಆದರೆ ಅಷ್ಟರಲ್ಲಿ ದೊಡ್ಡಮಳೆ ಬೀಳಹತ್ತಿದ್ದರಿಂದ ನಾನು ಬರಲಿ........"

"ಸಾಕು; ಸಾಕು, ತಿಳಿಯಿತು ನಿನ್ನ ಅಂಬೋಣವು. ನಿನ್ನಲ್ಲಿ ಪುಸ್ತಕಗಳಿಲ್ಲವಷ್ಟೇ? ಅಂದಮೇಲೆ ನಾಳಿನಿಂದ ನೀನು ಸಾಲೆಗೇ ಹೋಗಬೇಡ. ಇಷ್ಟು ಕಲಿತ ನೀನು ಏನು ಮಾಡುವಿಯೆಂಬುದು ಗೊತ್ತಾದ ಮಾತೇ ಅದೆ. ನಡೆ, ಇಲ್ಲಿಂದ ಹೊರಟುಹೋಗು. ಬೇಗನೆ ಊಟಕ್ಕೆ ನೀಡೆಂದು ನಿನ್ನಮ್ಮನಿಗೆ ತಿಳಿಸು.

"ಚಿಗ್ಯಪ್ಪಾ, ನಾನೇ ಇಂದು ನೀಡುತ್ತೇನೆ," ಎಂದು ಅಂಜುತ್ತಂಜುತ್ತ ಚಿನ್ನವ್ವನು ಅಡಿಗೆಯ ಮನೆಯ ಬಾಗಿಲಲ್ಲಿ ನಿಂತು ನುಡಿದಳು.

"ಚಿಗವ್ವಾ ನ್ಯಾನೆ ಇಂದ ನ್ವೀಡತ್ಯೇನೆ" ಎಂದು ಚಿನ್ನವ್ವನಿಗೆ ಅಣಕಿಸುತ್ತ ಸಾವಕ್ಕನು—ಸಟವೀ, ಹೊರಡು ಇಲ್ಲಿಂದ. ನಡುವೇ ಮಾತಾಡಲಿಕ್ಕೆ ನಾಚಿಕೆ ಬರುವದಿಲ್ಲವೇ ನಿಮಗೆ? ಹೋಗು ನಾನು ಕರೆದಾಗ ಬಾ, ಎಂದು ಚಿನ್ನವ್ವನ ಮೈಮೇಲೆ ಏರಿಹೋದಳು.

ಸಾಧ್ವಿಯಾದ ಗಂಗಮ್ಮನು ಹೊರಸಿನಮೇಲೆ ಬಿದ್ದುಕೊಂಡೇ ಈ ಎಲ್ಲ ಸಂಭಾಷಣವನ್ನು ಕೇಳುತ್ತಿದ್ದಳು. ಹೇಮಾದ್ರಿಯ ಕಾಲವೇಲೆ ಸಣ್ಟಲು ಬಿದ್ದು, ಅವನು ಚಿಟ್ಟನೆ ಚೀರಿದಾಗಿನಿಂದ ಅವಳ ಕಣ್ಣೊಳಗಿಂದ ಒಂದೇಸವನೆ ಕಂಬನಿಗಳು ಉದುರುತ್ತಿದ್ದವು. ಆಗ ಅವಳ ಮನಸ್ಸಿನಲ್ಲಿ ಹಲವು ಬಗೆಯ ವಿಚಾರಗಳು ಬರುತ್ತಿದ್ದವು. ತನ್ನ ಮಗನಿಗೆ ಇಷ್ಟು ತುಚ್ಛತೆಯಿಂದ ಉಚ್ಚರಿಸಿದ ಸಾವಕ್ಕನ ಕಠೋರಶಬ್ದಗಳು ಅವಳ ಹೃದಯವನ್ನು ಭೇದಿಸುತ್ತಿದ್ದವು. ಅವಳು ಎಷ್ಟೋ ಹೊತ್ತಿನವರೆಗೆ ಒಂದೇಸವನೆ ಅತ್ತಳು. ಅಷ್ಟರಲ್ಲಿ ಆ ಕೋಣೆಯ ಬಾಗಿಲ ತೆರೆದು ಕುಂಟುತ್ತ ಕುಂಟುತ್ತ ಹೇಮಾದ್ರಿಯು ಒಳಗೆ ಬಂದನು. ಅವನ ಆ ಸ್ಥಿತಿಯನ್ನು ನೋಡಿದಬಳಿಕಂತೂ ಆ ಒಡವೆಯ ದುಃಖವು ಇಮ್ಮಡಿಸಿತು. ತಾಯಿಯ ಅವಸ್ಥೆಯನ್ನು ಕಂಡು ಹೇಮಾದ್ರಿಯು ತನ್ನ ದುಃಖವನ್ನು ಹತ್ತೊತ್ತಿಕೊಂಡು ಅವಳ ಬಳಿಗೆ ಹೋಗಿ ಕುಳಿತನು. ಅವನು ತನ್ನ ದುಃಖವನ್ನು ಶಾಂತಗೊಳಿಸುವದಕ್ಕಾಗಿ ಬಹಳೇ ಪ್ರಯತ್ನಿಸಿದನು. ಆದರೆ ಅವನಿಗೆ ಅದು ಸಾಧಿಸಲಿಲ್ಲ. ಇಷ್ಟರಲ್ಲಿ ಚಿಗವ್ವನಿಂದ ಅಪಮಾನಹೊಂದಿದ್ದರಿಂದ ಹುಚ್ಚುಹಿಡಿದವಳಂತೆ ಮುಖವಾಗಿದ್ದ ಚಿನ್ನವ್ವನೂ ಅಲ್ಲಿಗೆ ಬಂದಳು. ಅವಳಿಗೆ ತಾಯಿಯ ಹಾಗು ಅಣ್ಣನ ಸ್ಥಿತಿಯು ಕಣ್ಣಿಗೆ

ಬಿದ್ದಕೂಡಲೆ, ಅವಳು ದೊಡ್ಡ ದನಿ ತೆಗೆದು ಅಳಲಾರಂಭಿಸಿದಳು. ಆಗ ಹೇಮಾದ್ರಿಯೂ, ಗಂಗವ್ವ್ಮನೂ ಚಿನ್ನವ್ವನ ಕೂಡ ಅತ್ತರು. ಹೀಗೆ ಆ ಮೂವರೂ ಕೂಡಿ ಕೆಲಕಾಲ ಅಶ್ರುಗಳನ್ನು ವರ್ಷಿಸಿದರು. ಅದರಿಂದ ಅವರ ಅಂತರಂಗದಲ್ಲಿ ಸಂಚಯಿಸಿದ್ದ ದುಃಖದ ಕೆಲಭಾಗವು ಕಣ್ಣೊಳಗಿನ ನೀರಿನ ರೂಪದಿಂದ ಹರಿದು ಹೋಗಲು, ಅವರಿಗೆ ತುಸ ವಿರಾಮವಾಯಿತು.

ಅವರು ದುಃಖಿಸುವದನ್ನು ಬಿಟ್ಟುಕೊಟ್ಟು ಇನ್ನು ಒಬ್ಬರಕೂಡೊಬ್ಬರು ಮಾತಾಡತಕ್ಕವರು, ಅಷ್ಟರಲ್ಲಿ ಅವರ ಕೋಣೆಯ ಬಾಗಿಲವು ಧಡಕ್ಕೆಂದು ತೆರೆಯಿತು. ಕೂಡಲೆ ಬಸವ್ವನು ಒಳಗೆ ಪ್ರವೇಶಿಸಿ, ಗಂಗವ್ಮನನ್ನು ಕುರಿತು ಗಟ್ಟಿಯಾಗಿ—''ದೊಡ್ಡವ್ವಾ, ಏ ದೊಡ್ಡವ್ವಾ ಏಳು ಊಟಕ್ಕೆ ನೀಡೇಳು'' ಎಂದು ಕೂಗಿದಳು.

ಇತ್ತ ಕೆಳಗೆ ಇವರ ಸಂಭಾಷಣವು ಹೀಗೆ ನಡೆದಿರುವಾಗ ಅತ್ತ ಅಟ್ಟದಮೇಲೆ ಸಾವಕ್ಕ ಹಾಗು ಶಂಕರಪ್ಪ ಇವರಲ್ಲಿ ಒಳ್ಳೇ ಗೌಪ್ಯವಾದ ಸಂಭಾಷಣವು ನಡೆದಿತ್ತು. ಈಚೆಗೆ ಆರೇಳು ತಿಂಗಳುಗಳಿಂದ ನಮ್ಮ ಭೋಳೇ ಶಂಕರಪ್ಪನವರಿಗೆ ಅವರ ದುರ್ಮಿತ್ರರ ಸಹವಾಸದಿಂದ ಸೆರೆಕುಡಿಯುವ ದುಶ್ಚಟವು ಗಂಟು ಬಿದ್ದಿತ್ತು. ಮೊದಮೊದಲು ಆ ವ್ಯಸನದ ಬಗ್ಗೆ ಸಾವಕ್ಕನು ಅವರಿಗೆ ಬಹುಪರಿಯಾಗಿ-ಸಿಟ್ಟು ಮಾಡಿ, ಭಾವೀಹಾರಿಕೊಳ್ಳುವೆನೆಂಬ ಹೆದರಿಕೆ ತೋರಿಸಿ, ಮತ್ತು ಅನೇಕ ಬಗೆಯಾಗಿ-ಹೇಳಿ ನೋಡಿದಳು. ಅದರ ಉಪಯೋಗವೇನೂ ಆಗಲಿಲ್ಲ. ತನ್ನಿಂದ ತನ್ನ ಗಂಡನ ವ್ಯಸನವನ್ನು ಬಿಡಿಸುವದಾಗುವದಿಲ್ಲೆಂಬದು ಅವಳ ಮನವರಿಕೆಯಾಗಲು, ಇತ್ತೀಚೆಗೆ ಅವಳು ಗಂಡನ ಆ ವ್ಯಸನಾಧೀನತೆಯು ಮಂದಿಯ ಕಣ್ಣಿಗೆ ಬೀಳದಹಾಗೆ ಉಪಾಯವನ್ನು ಮಾಡತೊಡಗಿದಳು. "ನಿಮಗೆ ಎಷ್ಟು ಲೋಲು ಹೊಡೆಯ ಬೇಕಾಗಿದೆಯೋ ಅಷ್ಟು ಮನೆಯಲ್ಲಿಯೋ ತಂದು ಹೊಡೆಯಿರಿ. ಹೊರಗೆ ಮಂದಿಯ ಮುಂದೆ ಈ ಪ್ರಕಾರದ ಅವಲಕ್ಷಣವನ್ನು ತೋರಿಸಿ ಕೊಳ್ಳಬೇಡಿರಿ.'' ಹೀಗೆಂದು ಅವಳು ಶಂಕರಪ್ಪನಿಗೆ ಆಗಾಗ್ಗೆ ಹೇಳುತ್ತಿದ್ದಳು. ಸಂಜೆಯ ಮುಂದೆ ಮನೆಗೆ ಬರಲಿಕ್ಕೆ ತುಸ ತಡವಾದ ಕೂಡಲೆ ತನ್ನ ಗಂಡನು ಇಂದು ಸೆರೆಕುಡಿದು ದೇಹಭಾನವಿಲ್ಲದವನಾಗಿ ಬರುವನೆಂದು ಸಾವಕ್ಕನಿಗೆ ಆಗಲೆ ಹೊಳೆಯುತ್ತಿತ್ತು. ಶಂಕರಪ್ಪನು ಇನ್ನೂ ನಾಮಾಂಕಿತ ಸೆರೆಕುಡಕನಾಗಿರಲಿಲ್ಲ. ತಾನು ಇನ್ನೂ ಚನ್ನಾಗಿ ಪ್ರಯತ್ನಿಸಿದರೆ ತನ್ನ ಗಂಡನನ್ನು ಈ ದುರ್ವ್ಯಸನದಿಂದ ಬಿಡಿಸಬಹುದೆಂದು ಸಾವಕ್ಕನಿಗೆ ಅನಿಸುತ್ತಿತ್ತು; ಮತ್ತು ಆ ಪ್ರಕಾರ ಅವಳು

ಪ್ರಯತ್ನವನ್ನು ಬಿಟ್ಟೂಬಿಡದೆ ನಡಿಸಿದ್ದಳು; ಆದರೆ ಸೆರೆಗುಡುಕರ ಮೇಲೆ ಹಿತೋಪದೇಶದ ಪರಿಣಾಮವು ಎಷ್ಟರಮಟ್ಟಿಗಾಗಬಹುದೆಂಬದರ ಅನುಭವವು ಅವಳಿಗಿರಲಿಲ್ಲ. ಬರಬರುತ್ತ ಅವಳು ಗಂಡನಿಗೆ ಹೆದರಿಕ-ಬೆದರಿಕಲಿಕ್ಕೆ ಕೂಡ ಕಡಿಮೆ ಮಾಡಲಿಲ್ಲ. ಆದರೆ ಮದಿರಾದೇವಿಯ ಸಹವಾಸದಿಂದ ಮತ್ತನೂ ವಿವೇಕಶೂನ್ಯನೂ ಆದ ಶಂಕರಪ್ಪನಿಗೆ ಅವಳ ಆ ಹೆದರಿಕೆ-ಬೆದರಿಕೆಗಳಿಂದೇನಾಗಬೇಕಾಗಿದೆ? ತನ್ನ ಗಂಡನು ಸೆರೆಕುಡಿದು ಮದಾಂಧನಾದಾಗ ಅವನ ಬಾಯಿಂದ ಹೊರಡುವ ಅಸಂಬದ್ಧ ಪ್ರಲಾಪಗಳಿಂದಲೂ, ಹೊಯ್ದಾಡುತ್ತ ನಡೆಯುವ ಆತನ ನಡಿಗೆಯಿಂದಲೂ ಆ ಮಾನೀ ಸ್ವಭಾವದ ಸಾವಕ್ಕನಿಗೆ ಮರಣಪ್ರಾಯವಾದ ದುಃಖವಾಗುತ್ತಿತ್ತು. ಇರಲಿ.

"ಈ ಖೋಡಿ ಹುಡುಗರ ಎದುರಿಗೆ ನೀವು ಈ ಪ್ರಕಾರ ಮದಾಂಧರಾಗಿ ಬರುವದು ಹಿತವೇ?" ಎಂದು ಸಾವಕ್ಕನು ಮೇಲುಪ್ಪರಿಗೆಯ ಮೇಲೆ ಹೋದ ಬಳಿಕ ಗಂಡನಿಗೆ ಅಂದಳು.

"ಮದಾಂಧನೇ, ಯಾರು ನನ್ನನ್ನು ಮದಾಂಧನಾಗಮಾಡಿರುವರು? ಹ-ಹ-ಹ" ಎಂದು ನಗುತ್ತ ಶಂಕರಪ್ಪನು ಮೈಯೊಳಗಿನ ಅಂಗಿಗಳನ್ನು ಬಿಚ್ಚಿಟ್ಟು— "ಏನೇ, ನನ್ನನ್ನು ಮದಾಂಧನಾಗಮಾಡುವವರಾರು? ನಾನೇ ಮಂದಿಯನ್ನು ಮದಾಂಧರಾಗಮಾಡುವೆನು. ಆದರೆ ಏನೇ, ಎಲೇ, ಇತ್ತಬಾ. ನೀನು ನನ್ನದೊಂದು ಮಾತನ್ನು ಕೇಳಿಕೊಳ್ಳುವೆಯಾ? ನನ್ನದೊಂದು ಕೆಲಸವನ್ನು ಮಾಡುವೆಯಾ?" ಎನ್ನುತ್ತ ಸಾವಕ್ಕನ ಕೈಹಿಡಿದನು.

"ಮಾಡುತ್ತೇನೆ; ಆದರೆ ನಾನು ಹೇಳಿದಂತೆ ನೀವು ನಡೆಯುತ್ತಿದ್ದರೆಮಾತ್ರ"

"ಹೇಳು. ಬೇಗನೆ ಹೇಳು. ನಡೆಯುವದಿಲ್ಲೆಂದು ಅನ್ನುವ ಧೈರ್ಯವು ಈ ನಿನ್ನ ಪತಿರಾಜ-ಗಂಡ-ನಿಗೆಲ್ಲಿದೆ?" ಎಂದು ನುಡಿದು ಶಂಕರಪ್ಪನು ಅವಳನ್ನು ತನ್ನ ಬಾಹುಪಾಶದಲ್ಲಿ ಬಿಗಿದುಕೊಳ್ಳಲಾರಂಭಿಸಿದನು.

ಆಗ ತನ್ನನ್ನು ತನ್ನ ಪತಿಯು ಕರದ್ವಯಗಳಿಂದ ಬಿಡಿಸಿಕೊಳ್ಳುತ್ತ ಸಾವಕ್ಕನು—"ಬಿಡಿರಿ. ಇದೇನು? ಥೂ-ಅಂ, ಎಂಥ ಹೊಲಸುನಾತವಿದು? ನನ್ನನ್ನು ಮುಟ್ಟಬೇಡಿರಿ. ಬಿಟ್ಟುಬಿಡಿರಿ. ಈ ವಯಸ್ಸಿಗೆ ನಿಮಗೀ ಛಂದವು ಶೋಭಿಸುವದಿಲ್ಲ. ಹೂಂ" ಎಂದೆನ್ನುತ್ತ ಪತಿಯ ಬಾಹುಪಾಶದಿಂದ ಹೇಗಾದರೂ ಒಮ್ಮೆ ಮುಕ್ತಳಾಗಿ ಕಾರಿಕೊಳ್ಳುವದಕ್ಕಾಗಿ ಕಿಟಕಿಯ ಕಡೆಗೆ ಧಾವಿಸಿದಳು.

ಶಂಕರಪ್ಪನೂ ಆಕೆಯ ಹಿಂದಿಂದೇ ಹೋಗಿ—"ಏನೇ, ಶೋಭಿಸಿಕೊಂಡರೆ ಎಲ್ಲವೂ ಸಹಜವಾಗಿ ಶೋಭಿಸುವದಿಲ್ಲವೇ?" ಎಂದು ಮತ್ತೆ ಅವಳನ್ನು ಹಿಡಿಯ ಹೋಗಲು,

"ಈ ನಿಮ್ಮ ಹುಡುಗಾಟಿಕೆಯು ನನಗೆ ಸೇರಲಿಕ್ಕಿಲ್ಲ, ಸರಿಯಿರಿ ಹಿಂದಕ್ಕೆ" ಎಂದು ಹೆಂಡತಿಯು ಗರ್ಜಿಸಲು, ಹಿಂದಕ್ಕೆ ಸರಿದು ನಿಂತು ಶಂಕರಪ್ಪನು—"ಒಳ್ಳೇದು ನಿನ್ನಂತೆಯೇ ಆಗಲಿ, ಆಯಿತೇ? ಆದರೆ ಏನೇ, ನನ್ನ ಮಾತು ಕೇಳಿಕೊಳ್ಳುವಿಯಷ್ಟೇ? ಇತ್ತೀಚಿಗೆ ನನಗೀ ಮನೆಯು ತಲೆರೋಸಿಗೆ ಹಿಡಿದದೆ. ಈ ಮನೆಯನ್ನು ಬಿಡಬೇಕೆಂದು ನನಗನಿಸುತ್ತದೆ" ಎಂದನು.

ಸಾವ—"ಹಾಗೇ ಆಗಲಿ"

ಶಂಕರ—"ಹಾಗೇ ಆಗಲೆಂದರೇನು?"

ಸಾವ—"ನೀವು ಏನು ಹೇಳಬೇಕೆಂದಿರುವಿರೋ ಹೇಳಿರಿ; ನಾನು ಲಕ್ಷ್ಯ ಗೊಟ್ಟು ಅದನ್ನು ಕೇಳಿಕೊಳ್ಳುತ್ತೇನೆ.

ಶಂಕರ—ಈ ಮನೆ ಬಿಡಬೇಕೆಂದು ನನ್ನಂತೆ ನಿನಗೂ ಅನಿಸುವದಿಲ್ಲೇನು?

ಸಾವ—ಅನಿಸುತ್ತದೆ. ಆದರೆ ಹೋಗಬೇಕೆಲ್ಲಿಗೆ?

ಶಂಕರ—ಅದನ್ನೇ ಈಗ ನಾನು ನಿನಗೆ ಹೇಳುತ್ತೇನೆ. ಆ ಸಾಲೀ ಶರಣಪ್ಪ ನವರ ಮನೆಯು ನಮ್ಮ ಶೇಟಜಿಯ ಕಡೆಗೆ ಒತ್ತಿಯಿದೆಯೆಂಬದನ್ನು ನಾನು ನಿನಗೆ ಹಿಂದಕ್ಕೆ ತಿಳಿಸಿದ್ದೆನಲ್ಲವೆ? ಈಗ ಅವರು ಅದನ್ನು ಮಾರಹತ್ತಿರುತ್ತಾರೆ. ನಮ್ಮ ಶೇಟಜಿಯು ನನಗೇ ಅದನ್ನು ತೆಗೆದುಕೊಳ್ಳಲಿಕ್ಕೆ ಒತ್ತಾಯ ಮಾತಾಡುತ್ತಲಿದ್ದಾನೆ. ನಿನಗಾದರೆ ನಾನು ಅದನ್ನು ಬಹು ಅಗ್ಗದಿಂದ ಕೊಡಿಸುತ್ತೇನೆಂದು ಅವನು ಅಂದನು. ಆದ್ದರಿಂದ ನಾನು ಈಗಾಗಲೆ ಹನ್ನೆರಡುನೂರು ರೂಪಾಯಿಗಳನ್ನು ಅವರಿಗೆ ಭರ್ತಿ ಮಾಡಿದ್ದೇನೆ. ಆ ಮನೆಯೂ, ಅಂಗಳ-ಹಿತ್ತಲಗಳೂ ಬಹು ಚನ್ನಾಗಿವೆ.

"ಆ ಮನೆಗಾಗಿ ನೀವು ಹನ್ನೆರಡುನೂರು ರೂಪಾಯಿಗಳನ್ನು ಈಗಾಗಲೇ ಕೊಟ್ಟುಬಿಟ್ಟಿರಾ?" ಎಂದು ಆಶ್ಚರ್ಯಚಕಿತಳಾದ ಸಾವಕ್ಕನು ನುಡಿದು ಪುನಃ—ಬಸವ್ವನ ಮದುವೆಗೆಂದು ನಮ್ಮಪ್ಪನು ಅಷ್ಟು ರೂಪಾಯಿಗಳನ್ನು ನಿಮ್ಮಲ್ಲಿ ಠೇವಾ ಗಿಟ್ಟಿದ್ದನಲ್ಲವೇ?

"ಬಸವ್ವನ ಮದುವೆಗೆ ಇಷ್ಟು ಅವಸರವೇಕೆ? ಅವಳು ದೊಡ್ಡವಳಾ ದರೂ ಆಗಲಿ, ನೋಡಲಿಕ್ಕೆ ಬಂದೀತು;" ಎಂದು ಶಂಕರಪ್ಪನು ಹೇಳಲು, ಸಾವ ಕ್ಕನು ಒಳ್ಳೇ ಗಹನವಾದ ವಿಚಾರದಲ್ಲಿ ಮಗ್ನಳಾದಳು. ಶಂಕರಪ್ಪನು ಪಿಟ್ಟೆಂದ್ಯ

ಕೂಡ ಉಸುರದೆ, ಆಕೆಯ ಮೋರೆಯನ್ನೇ ಮಿಕಿಮಿಕಿ ನೋಡುತ್ತ ಕುಳಿತನು. ಆಗ ಅವರೀವರ ಮನಸ್ಸಿನಲ್ಲಿ ಯಾವ ವಿಚಾರಗಳು ಉತ್ಪನ್ನವಾಗಿದ್ದವೆಂಬದು ದೇವರಿಗೇ ಗೊತ್ತು. ಕೆಲಕ್ಷಣಗಳ ತರುವಾಯ ಶಂಕರಪ್ಪನು ಚಟ್ಟನೆ ಎದ್ದು, ತಂಬಿಗೆ ಯನ್ನು ತಕ್ಕೊಂಡು ಕೈ-ಕಾಲು-ಮೋರೆ ತೊಳೆದುಕೊಂಡನು. ಆದರಿಂದ ಅವ ನಿಗೆ ಕುಸ ವಿರಾಮವೆನಿಸಿತು. ಒಳಿಕ ಆತನು ಹೆಂಡತಿಯನ್ನು ಕುರಿತು—ನನ್ನ ಮನಸ್ಸಿನಲ್ಲಂತೂ ಆ ಮನೆಯನ್ನು ಕೊಂಡುಕೊಳ್ಳಲೇಬೇಕೆಂದಿದೆ. ಈಗ ಅನಾ ಯಾಸವಾಗಿ ಸಿಗುವ ಆ ಮನೆಯನ್ನು ಹಿಡಿದರೆ, ನಮ್ಮ ಮಾಲಕಿಯ ಮನೆ-ಹಿತ್ತಲ ಗಳಾಗುವವು. ಈಗ ನೀನು ಈ ಬಗ್ಗೆ ಇಲ್ಲದೊಂದು ಅಡ್ಡಿಯನ್ನು ತಂದರೆ ನನ್ನ ಅವಮಾನವಾಗುವ ಪ್ರಸಂಗ ಬಂದೀತು; ಆದ್ದರಿಂದ ನೀನು ನಾಳೆ ಬಸವ್ವನೊಡನೆ ತವರುಮನೆಗೆ ಹೋಗು; ಹಾಗು ನಿಮ್ಮಪ್ಪನಿಗೆ ಎಲ್ಲ ಸಂಗತಿಯನ್ನು ತಿಳಿಸು. ನಡೆದ ಸಂಗತಿಯನ್ನು ಕೇಳಿ ನಿಮ್ಮಪ್ಪನಿಗೆ ಸಂತೋಷವಾದೀತೇ ವಿನಃ ವಿಷಾದ ವೆಂದಿಗೂ ಆಗಲಾರದು. ಅವರು ಈ ಮಾತಿಗೆ ಖಂಡಿತವಾಗಿ ಒಪ್ಪಬಹುದು. ಈ ಕೆಲಸಕ್ಕಾಗಿ ನೀನು ಅವರಿಂದ ಬಹಳ ರಕಮೂ ತರಬೇಕಾಗಿಲ್ಲ. ಇನ್ನು ಐದು ನೂರುರೂಪಾಯಿ ಮಾತ್ರ.

ಸಾವ—"ಏನಂದಿರಿ? ಇನ್ನೂ ಐದುನೂರು ರೂಪಾಯಿಗಳೇ? "

ಶಂಕರಪ್ಪ—ಈ ಬಗ್ಗೆ ನೀನು ಇಷ್ಟೊಂದು ತತ್ತರಿಸುವ ಕಾರಣವಿಲ್ಲ. ಒಂದೂವರೆ ಸಾವಿರಕ್ಕೆ ಆ ಮನೆಯು ಹೊಂದಿದೆ. ಅದಕ್ಕಾಗಿ ನಾನು ಈಗಾಗಲೆ ಹನ್ನೆರಡುನೂರು ರೂಪಾಯಿ ತುಂಬಿಬಿಟ್ಟಿರುತ್ತೇನೆ ಇನ್ನು ಅವರಿಗೆ ಮುನ್ನೂರು ಕೊಟ್ಟರೆ ತೀರಿತು. ಆ ಮುನ್ನೂರು ಹಾಗು ಮತ್ತೆ ಎರಡುನೂರು ಅಡಚಣಿಗಳ ಪ್ರಸಂಗದಲ್ಲಿ ಉಪಯೋಗಕ್ಕೆಂದು. ಹೀಗೆ ಒಟ್ಟಿಗೆ ಐನೂರು ರೂಪಾಯಿಗಳಾದರೆ ಆಯಿತು.

ಸಾವಕ್ಕ—ಇಷ್ಟು ರೂಪಾಯಿಗಳನ್ನು ಅಪ್ಪನು ಹೇಗೆ ಕೊಟ್ಟಾನು? ಬಹಳ ವಾದರೆ ಮುನ್ನೂರು—ಛೇ, ಅಷ್ಟು ರೂಪಾಯಿಗಳನ್ನಾದರೂ ನಾನು ಅವರಿಗೆ ಯಾವ ಮೋರೆಯಿಂದ ಕೇಳಲಿ? ಛೇ! ಛೇ! ನಾನು ಹೋಗುವದೇ ಇಲ್ಲ. ನೀವೇ ಹೋಗಿರಿ-ಬಿಡಿರಿ. ಬೇಕಾದ ಹಾಗೆ ಮಾಡಿರಿ.

ಸಾಲೀ ಶರಣಪ್ಪನವರ ಪ್ರಶಸ್ತವಾದ ಮನೆಯನ್ನೂ ಅಚ್ಚುಕಟ್ಟಾದ ಅವರ ಹಿತ್ತಲು-ಮುಂಚೆಗಳನ್ನೂ ಸಾವಕ್ಕನು ಎಷ್ಟೋ ಸಾರೆ ನೋಡಿದ್ದಳು. ಇಂಥ ದೊಂದು ಮನೆಯು ತಮ್ಮ ಸ್ವತ್ತಿನದಿರಬೇಕೆಂದು ಅವಳು ಈ ಮೊದಲು ತನ್ನ ಪತಿ

ಯು ಬಳಿಗೆ ಎಷ್ಟೋ ಸಾರೆ ಬಂದಿದ್ದಳು. ಆದರೆ ತನ್ನ ಆ ಇಚ್ಛೆಯು ಇಂದು ಅನಾಯಾಸವಾಗಿ ಈಡೇರುವಂತಿತ್ತಾದ್ದರೂ ತನ್ನ ಮಗಳಾದ ಬಸವ್ವನ ಮದುವೆಗೆಂದು ತಮ್ಮ ಅಪ್ಪನು ಕೊಟ್ಟ ಎಲ್ಲ ರಕಮು ಹೋಗುವದಲ್ಲದೆ ಅದಕ್ಕಾಗಿ ಮತ್ತೆ ಮೂನ್ನೂರು ರೂಪಾಯಿಗಳು ಬೇಕೆಂಬ ಸಂಗತಿಯು ಅವಳ ನಿದರ್ಶನಕ್ಕೆ ಬರಲು, ಅದು ಅವಳಿಗೆ ಸಹನವಾಗದಾಯಿತು.

ಮೇಲೆ ಹೇಳಿದ ಸಾವಕ್ಕನ ಮಾತಿಗೆ ಎಷ್ಟೋ ಹೊತ್ತಿನ ವರೆಗೆ ಶಂಕರಪ್ಪನು ಏನೂ ಅನ್ನಲೇ ಇಲ್ಲ. ಕಡೆಗೆ ಆಕೆಯು ಒಲವಿನಂತೆಯೇ ಮಾತಾಡಿ "ನಾಳೆ ತವರುಮನೆಗೆ ಹೋಗಿ ತಂದೆಯ ಕಡೆಯಿಂದ ಐದು ನೂರು ರೂಪಾಯಿಗಳನ್ನು ಇಸಕೊಂಡು ಬರುತ್ತೇನೆ." ಎಂದು ಅವಳಿಂದ ವಚನ ತಕ್ಕೊಂಡನು.

ಒಳಿಕ ಸಾವಕ್ಕನು ಗಂಡನನ್ನು ಕುರಿತು—ನಾನು ನಿಮ್ಮ ಮಾತು ಕೇಳಿದಂತಾಯಿತೇ? ಇನ್ನು ನೀವು ಮಾತ್ರ ನನ್ನ ಮಾತನ್ನು ನಡಿಸಬೇಕಲ್ಲವೆ!

ಶಂಕರ—ಅವಶ್ಯವಾಗಿ ನಡಿಸುವೆನು. ಮಾತಾಡು. ನಿನ್ನ ಅಂಬೋಣವಾದರೂ ಏನೆಂಬದು ಗೊತ್ತಾಗಲಿ?

ಒಳ್ಳೇ ವೈಯ್ಯಾರ ಮಾಡುತ್ತ ಸಾವಕ್ಕ—ಈ ಹೇಮನು ಈಚೆಗೆ ಬಹಳ ಸೊಕ್ಕಿಗೆ ಬಂದಿರುತ್ತಾನೆ. ಅವನಿಂದ ಕಲಿಯುವದು ಆಗುವದಿಲ್ಲ. ಆದುದರಿಂದ ಸಾಲೀಬಿಡಿಸಿ ಅವನನ್ನು ನಾಳಿನಿಂದ ಬಸಲಿಂಗಪ್ಪನವರ ಗಿರಣಿಯಲ್ಲಿ ಯಾವದೊಂದು ಕೆಲಸಕ್ಕೆ ಕಳಿಸಬೇಕು. ಇದಕ್ಕೆ ನೀವು ಒಪ್ಪುವದಾದರೆ ನಾನು ನಾಳೆ ತವರು ಮನೆಗೆ ಹೊರಡುತ್ತೇನೆ.

ಶಂಕರಪ್ಪ—ಏನ, ಆ ಹುಡುಗನು ಗಿರಣಿಯಲ್ಲಿ ಹೋಗಿ ಮಾಡುವದೇನು? ಆ ಎಡಹುಡುಗನಿಂದ ಆ ಗಿರಣಿಯಲ್ಲಿಯ ಶ್ರಮದ ಕೆಲಸಗಳಾಗಲಾರವು. ಆತನು ತಾನಾಗಿ ಒಲ್ಲೆನೆನ್ನುವವರಿಗೆ ಕಲಿಯಲೊಲ್ಲನೇಕೆ?

ಸಾವಕ್ಕ—ನಾನು ಮಾತ್ರ ತಾವು ಏನು ಹೇಳಿದರೂ ಕೇಳಿ ಅದರಂತೆ ನಡೆಯಲಿಕ್ಕೆ ಸಿದ್ಧಳಾಗಬೇಕು; ನೀವು ಮಾತ್ರ ಇಂಥ ಕ್ಷುಲ್ಲಕ ಮಾತುಗಳನ್ನು ಕೂಡ ನಡೆಯಗೊಡಬಾರದು. ಬೇಡಿರಿ, ಆ ನಿಮ್ಮ ಹೇಮಪ್ಪನವರನ್ನು ಗಿರಣಿಗೆ ಕಳಿಸಬೇಡಿರಿ; ಮಹಾಪಂಡಿತನಾಗುವವರೆಗೆ ಆತನಿಗೆ ವಿದ್ಯೆ ಕಲಿಸಿರಿ. ಆಯಿತೇ? ನಿಮಗೆ ಇನ್ನೊಮ್ಮೆ ತಿಳಿಸುತ್ತೇನೆ. ನಾಳೆಗೆ ನಾನು ತವರುಮನೆಗೆ ಹೋಗುವವಳಲ್ಲ; ಹಾಗು ನಿಮಗೆ ಬೇಕಾಗಿರುವ ರೂಪಾಯಿಗಳನ್ನು ತರುವವಳಲ್ಲ. ನನಗೆ

ನಿಮ್ಮ ಆ ಹೊಸಮನೆಯೂ ಬೇಡ; ಈ ಸಂಸಾರವೂ ಬೇಡ; ಎಂದಂದು ಅಲ್ಲಿಂದ ಎದ್ದು ಹೋಗಹತ್ತಲು,

ಶಂಕರಪ್ಪನು ಹೆಂಡತಿಯ ಮುಂಗೈ ಹಿಡಿದು ಸಮೀಪಕ್ಕೆ ಎಳೆದು, ಕೂಡಿಸಿ ಕೊಂಡು—ಒಳ್ಳೇದು ನಿನ್ನಂತೆಯೇ ಆಗಲಿ. ನಾಳೆಗೆ ಹೇಮನನ್ನು ಗಿರಣಿಗೆ ಕಳಿಸಿ ಕೊಡುವೆನು. ಇಷ್ಟಕ್ಕಾಗಿ ನೀನು ಸಿಟ್ಟಾಗಬೇಡ; ನಾಳೆ ಬೆಳಿಗ್ಗೆ ಎದ್ದಕೂಡಲೆ ಅವನನ್ನು ಬಸಲಿಂಗಪ್ಪನವರ ಗಿರಣಿಗೆ ಕಳಿಸಿಕೊಡುವೆನು, ಅಂದರಾಯಿತೇ ನಿನ್ನ ಮಾತು ನಡಿಸಿದಂತೆ!

ಒಳ್ಳೇ ಹರುಷದಿಂದ ಸಾವಕ್ಕನು—ಈಗ ಹೇಗೆ ಒಪ್ಪಿದಿರಿ? ಮೂಗು ಒತ್ತಿ ಹಿಡಿದರೆ ಬಾಯಿಯು ತಾನೇ ತೆರೆಯುವದು; ಎಂದಂದು ಅಟ್ಟದ ಮೇಲಿನಿಂದಲೇ ಗಟ್ಟಿಯಾಗಿ—ಬಸವಾ, ನಿಮ್ಮ ದೊಡ್ಡಪ್ಪನು ಇನ್ನೂ ಬರಲಿಲ್ಲವೇ? ಊಟ ನೀಡ ಲಿಕ್ಕೆ ಬೇಗನೆ ಕರೆ, ಎಂದು ಕೂಗಿದಳು.

"ಏನಂದೀ? ಮೂಗು ಒತ್ತಿಹಿಡಿದರೆ ಬಾಯಿ ತೆರೆಯುವದೆಂದು ಅಂದೆ ಯಲ್ಲವೆ? ಹೌದು. ನೀನನ್ನುವದು ಸತ್ಯವು, ಸತ್ಯವು;" ಎನ್ನುತ್ತ ಶಂಕರಪ್ಪನು ಅತ್ತಿತ್ತ ಅಡ್ಡಾಡಹತ್ತಿದನು. ಆಗ ಅವನ ಮನಸ್ಸು ಮತ್ತೆ ಯಾವದೋ ಒಂದು ವಿಚಾರದಲ್ಲಿ ಮಗ್ನವಾಯಿತು.

ಐನೂರು ರೂಪಾಯಿಗಳ ವಿಷಯವು ತನ್ನ ಹೆಂಡತಿಗೆ ಎಷ್ಟರಮಟ್ಟಿಗೆ ರುಚಿಸ ಬಹುದೆಂದು ಅವನಿಗೆ ಮನೆಗೆ ಬರುವಾಗ ಉಂಟಾಗಿದ್ದ ಅನುಮಾನವು ಕೇವಲ ಅನುಮಾನವಾಗಿಯೇ ಈಗ ಪರಿಣಮಿಸಿ, ಇನ್ನು ನಾಲ್ಕಾರು ದಿನಗಳಲ್ಲಿ ತನ್ನ ಕೈಯಲ್ಲಿ ಐನೂರು ರೂಪಾಯಿಗಳು ಬರುವದು ಖಂಡಿತವೆಂದು ಅವನ ಮನವರಿಕೆ ಯಾಯಿತು. ಆ ಐನೂರು ರೂಪಾಯಿಗಳು ಬಂದಮೇಲೆ ಅವುಗಳ ವ್ಯವಸ್ಥೆಯ ನ್ನೇನುಮಾಡಬೇಕು? ಎಂಬೀ ವಿಚಾರದಿಂದ ಅವನ ಮಸ್ತಕವು ನಿನಾದಮಯ ವಾಗಿತ್ತು. ಆಗಿನ ಶಂಕರಪ್ಪನ ಮನೋರಾಜ್ಯವು ನಮಗೆ ಮುಂದೆ ತಾನಾಗಿಯೇ ತಿಳಿಯುವದು. ಆದರೆ ಇದೇ ಕಾಲಕ್ಕೆ ಸಾವಕ್ಕನಲ್ಲಿ ಯಾವ ವಿಚಾರಗಳು ಉಂಟಾಗಿದ್ದವೆಂಬದನ್ನು ನಾವು ಮೊದಲು ತಿಳಿದುಕೊಳ್ಳುವಾ.

ಅವಳು ಎಷ್ಟೋ ಹೊತ್ತಿನವರೆಗೆ ಯಾವದೋ ಒಂದು ಮನೋರಾಜ್ಯದಲ್ಲಿ ತಲ್ಲೀನಳಾಗಿದ್ದಳು ನಂತರ ಅವಳು—ನೀವು ಆ ಮನೆಯನ್ನು ಕೊಂಡುಕೊಂಡ ಮೇಲೆ ನಮಗೆ ಪೇಟೆಯಿಂದ ಕಾಯಿ-ಪಲ್ಲೆಗಳನ್ನು ತರುವ ಕಾರಣ ಬೀಳಲಿಕ್ಕಿಲ್ಲ ಯಾಕಂದರೆ ಆ ಶರಣಪ್ಪನವರ ಮನೆಯ ಅಂಗಳ-ಹಿತ್ತಲಗಳು ಪ್ರಶಸ್ತವಾಗಿರುವ

ದರಿಂದ ಅಲ್ಲಿ ಬೇಕಾದಷ್ಟು ಕಾಯಿ-ಪಲ್ಲೆಗಳನ್ನೂ, ಹಣ್ಣು-ಹಂಪಲಗಳನ್ನೂ ಬೆಳೆಯಬಹುದು.........

"ಭಲೆ! ನಿನ್ನ ಕಲ್ಪನೆಯು ಯಥಾರ್ಥವಾದದ್ದು." ಎಂದೆಂದು ಶಂಕರಪ್ಪನು ಖೊಳ್ಳನೆ ನಕ್ಕನು. ಬಳಿಕ ಆತನು—" ಅಲ್ಲಿ ಉಪವನವನ್ನು ಮಾಡೋಣ. ಆ ಉಪವನದಲ್ಲಿ ನಾವಿಬ್ಬರೂ ರಾಜ-ರಾಣಿಯರಂತೆ ವಿಹರಿಸೋಣ; ಅಂದರಾಯಿತೇ? " ಎಂದೆಂದು ಪತ್ನಿಯ ಹೆಗಲಮೇಲೆ ಕೈ ಒಗೆಯಲು, ತಂದೆ-ತಾಯಿಗಳ ಈ ಜಲ್ಲಾಟವನ್ನು ಅವರಿಗೆ ತಿಳಿಯದಹಾಗೆ ಅಲ್ಲಿ ಬಂದು ನಿಂತಿದ್ದ ಬಸವ್ವನು ಕಂಡು "ಖದ-ಖದನೆ" ನಕ್ಕಳು.

ಮಗಳು ನಕ್ಕದ್ದನ್ನು ಕೇಳಿ ಸಾವಕ್ಕನಿಗೆ ತುಸ ನಾಚಿಕೆಯುಂಟಾಯಿತು. ಆಗ ಅವಳು—ಬಸವ್ವಾ, ನಿಮ್ಮ ದೊಡ್ಡವ್ವನು ಇನ್ನೂ ಬರಲಿಲ್ಲೇನು? ಎಂದು ಗಟ್ಟಿಯಾಗಿ ಕೇಳಿ, ತನಗುಂಟಾಗಿದ್ದ ನಾಚಿಕೆಯನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಿಸಿದಳು.



# [೩]

ಮನುಷ್ಯನು ಯಾವಾಗಲೂ ಒಂದೇ ವಿಚಾರದಲ್ಲಿ ಮಗ್ನನಾಗಿ ಚಿಂತಾಕ್ರಾಂತನಾದರೆ ಅದರಿಂದ ಅವನ ಜೀವಕ್ಕೆ ಬೇಸರವುಂಟಾಗುವದು. ಅದಕ್ಕೋಸ್ಕರವೇ ಜಗನ್ನಿಯಂತನು ಮನುಷ್ಯಪ್ರಾಣಿಯ ಚಿತ್ತರಂಜನದ ಹಲವು ಸಾಧನಗಳನ್ನು ಕಲ್ಪಿಸಿಟ್ಟಿರುತ್ತಾನೆ ಕೆಲವರಿಗೆ ಸೃಷ್ಟಿಸೌಂದರ್ಯದಿಂದ ಆಹ್ಲಾದವಾಗುತ್ತದೆ; ಕೆಲವರಿಗೆ ಮನೆಯೊಳಗಿನ ಚಿಕ್ಕಪುಟ್ಟ ದೇವಸಮಾನ ಶಿಶುಗಳ ಅವ್ಯಕ್ತೋಪಮ ಹಾಗು ನಿಷ್ಕಪಟ ಸ್ವಚ್ಛಂದಾಲಾಪದಿಂದ ವಿರಾಮವೆನಿಸುತ್ತದೆ; ಹಾಗು ಬೇರೆ ಕೆಲವರಿಗೆ ತಮ್ಮ ಪ್ರಿಯ ಜನರ ಪ್ರೇಮಪೂರ್ವಕ ಸಹಾನುಭೂತಿಯ ವಚನಗಳಿಂದ ಉಲ್ಲಾಸವಾಗುತ್ತಿರುತ್ತದೆ. ನಮ್ಮ ಗಂಗಮ್ಮನ ಕೇವಲ ಕಷ್ಟಕರ ಹಾಗು ಚಿಂತಾಕ್ರಾಂತ ಜೀವನಕ್ಕೆ ಅವಳ ಪ್ರಿಯ ಅಪತ್ಯಗಳಾದ ಹೇಮಾದ್ರಿ-ಚಿನ್ನವ್ವ ಇವರಿಂದಲೇ ನೂತನ ಸ್ಫೂರ್ತಿಯು ಆಗಾಗ್ಗೆ ಉಂಟಾಗುತ್ತಿತ್ತು. ಆದರೆ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಉಂಟಾದ ಪ್ರಸಂಗದ ವಿಸ್ಮೃತಿಯು ಯಾವ ಬಾಹ್ಯಕಾರಣದಿಂದಲೂ ಆಗದ್ದರಿಂದ ಗಂಗಮ್ಮನು ಮನಸಿನಲ್ಲಿ ಕೊರಗಲಾರಂಭಿಸಿದಳು. ಇಷ್ಟರಲ್ಲಿ ಬಸಮ್ಮನು ಬಂದು—ದೊಡ್ಡವ್ವಾ, ಊಟಕ್ಕೆ ನೀಡೇಳು; ಎಂದು ಗರ್ಜಿಸಿದೊಡನೆ, ಆ ಜೀರ್ಣ-ಶೀರ್ಣ ಕಾಯದ ಗಂಗಮ್ಮನಿಗೆ ಹೊರಸಿನ ಮೇಲೆ ಬಿದ್ದುಕೊಂಡಿರುವದು ದುಸ್ಸಹವಾಯಿತು. ಸೆರಗಿನಿಂದ ತನ್ನ ಕಣ್ಣುಗಳನ್ನು ಒರಸಿಕೊಂಡು ಹೊರಸಿನಿಂದ ಎಳುತ್ತೇಳುತ್ತ ಅವಳು—"ಬಸವ್ವಾ, ಇಗೋ ಬಂದೆನು ನಡೆ" ಎಂದಂದು, ಒಳಗೆ ಹೋಗಿ, ಊಟಕ್ಕೆ ನೀಡಹತ್ತಿದಳು.

ಗಂಗಮ್ಮನು ತನ್ನ ಶರೀರಕ್ಕಾಗುತ್ತಿರುವ ಅಸಹ್ಯವೇದನೆಗಳನ್ನು ಹತ್ತಿಕ್ಕುತ್ತಿ ಅವರಿಗೆ ಊಟಕ್ಕೆ ನೀಡಿದಳು. ಊಟದ ಮನೆಯ ಮಧ್ಯದಲ್ಲಿ ಶಂಕರಪ್ಪನೂ ಅವನ ಬಳಿಯಲ್ಲಿ ಬಸಮ್ಮನೂ ಕುಳಿತಿದ್ದರು. ಒತ್ತಟ್ಟಿಗಿನ ಮೂಲೆಯಲ್ಲಿ ಹೇಮಾದ್ರಿಯೂ ಅವನ ಹತ್ತರ ಚಿನ್ನವ್ವನೂ ಅಧೋಮುಖರಾಗಿ ಕುಳಿತಿದ್ದರು.

ನಡುಮನೆಯ ಬಾಗಿಲಲ್ಲಿ ಸಾವಕ್ಕನು ಒಳ್ಳೇ ರೀವಿನಿಂದ ನಿಂತುಕೊಂಡು ಗಂಡನೊಡನೆ ಮಾತಾಡುತ್ತಿದ್ದಳು. ಆಗ ಅವಳ ಮನಸಿನಲ್ಲಿ ಮತ್ತೊಂದು ವಿಚಾರವು ಉತ್ಪನ್ನವಾಯಿತು. ನಾಳೆ ಬೆಳಿಗ್ಗೆ ತಾನು ತವರು ಮನೆಗೆ ಹೋದ ಮೇಲೆ

ಅಲ್ಲಿ ತನ್ನ ಮಲತಾಯಿಗೆ ತಿಳಿಯದ ಹಾಗೆ ತನ್ನ ತಂದೆಯಿಂದ ಐನೂರು ರೂಪಾಯಿಗಳನ್ನು ಹೇಗೆ ಇಸುಕೊಳ್ಳಬೇಕು? ತಾನು ಆಕಸ್ಮಿಕವಾಗಿ ಹೋದ ಕೂಡಲೆ ತನ್ನ ಮಲತಾಯಿಗೆ ತನ್ನ ವಿಷಯವಾಗಿ ಉಂಟಾಗುವ ಸಂಶಯದ ನಿವಾರಣಕ್ಕಾಗಿ ತಾನು ಯಾವ ಸುಳ್ಳು ಸಂಗತಿಯನ್ನು ಕಲ್ಪಿಸಿಕೊಂಡು ಹೇಳಬೇಕು? ನಾಳೆಯೇ ಹೋಗಬೇಕೋ ಇನ್ನೆರಡು ದಿನ ಕಳೆದು ಹೋಗಬೇಕೋ ಇತ್ಯಾದಿ ವಿಚಾರದಲ್ಲಿ ಅವಳ ಮನಸ್ಸು ತೊಡಗಿತ್ತು. ತಂದೆಯು ಈ ಮೊದಲು ತನ್ನ ಮಗಳ ಲಗ್ನಕ್ಕೆಂದು ತನಗೆ ಕೊಟ್ಟ ಹನ್ನೆರಡು ನೂರು ರೂಪಾಯಿಗಳ ಸಂಗತಿಯು ತನ್ನ ಮಲತಾಯಿಗೆ ತಿಳಿಯಲು ಆಗ ಅವಳು ಕಂಗಿಗೆದ್ದು ತನ್ನನ್ನು ತವರು ಮನೆಗೆ ಬಾರದ ಹಾಗೆ ಹೇಗೆ ಕಟ್ಟುಮಾಡಿದ್ದಳು, ಇತ್ಯಾದಿ ವಿಚಾರಗಳಲ್ಲಿ ಸಾವಕ್ಕನು ಮಗ್ನಳಾಗಿದ್ದರೂ ಅವಳ ದೃಷ್ಟಿಯುಮಾತ್ರ ಊಟಕ್ಕೆ ಕುಳಿತವರ ಮೇಲೆಯೇ ಇತ್ತು. ಇಂದು ಅನ್ನವು ಬೆಂದಿಲ್ಲ; ರೊಟ್ಟಿಯು ಹೊತ್ತಿ ಹೋಗಿದೆ; ಪಲ್ಲೆಗೆ ಉಪ್ಪೇ ಕಡಿಮೆ ಇತ್ಯಾದಿ ಬಸವ್ವನ ತಕರಾರು ನಡದೇ ಇತ್ತು. ಶಂಕರಪ್ಪನು ಸುಮ್ಮನೆ ಕುಳಿತು ಊಟ ಮಾಡುತ್ತಿದ್ದನು; ಆದರೆ ಅವರೆದುರಿಗೆ ಮೂಲೆಯಲ್ಲಿ ಕುಳಿತಿದ್ದ ಆ ಬಂಧು-ಭಗಿನಿಯರ ಸ್ಥಿತಿಯುಮಾತ್ರ ವಿಚಿತ್ರವಾಗಿತ್ತು. "ನಾಳೆನಿಂದ ಸಾಲೆಗೆ ಹೋಗಬೇಡ" ಎಂಬ ಚಿಗವ್ವನ ಶಬ್ದಗಳು ಹೇಮಾದ್ರಿಯ ಕಿವಿಯಲ್ಲಿ ಒಂದೇಸವನೆ ಪ್ರತಿಧ್ವನಿಗೊಡುತ್ತಿದ್ದವು. ಆದರಿಂದ ಅವನ ಲಕ್ಷ್ಯವು ಊಟದಲ್ಲಿ ಯತ್ಕಿಂಚಿತ್ತೂ ಇರಲಿಲ್ಲ. ಅವನ ಬದಿಯಲ್ಲಿ ಕುಳಿತಿದ್ದ ಅಲ್ಪವಯಸ್ಕ ಚಿನ್ನವ್ವನು ಶೂನ್ಯದೃಷ್ಟಿಯಿಂದ ಕೆಳಗೆ ನೋಡುತ್ತ ಊಟ ಮಾಡುತ್ತಿದ್ದಳು. ಯಾವುದೊಂದು ಪದಾರ್ಥವನ್ನು ನೀಡಲಿಕ್ಕೆಂದು ಅಡಿಗೆಮನೆಯಿಂದ ಹೊರಬೀಳುತ್ತಿರುವಾಗಿನ ಗಂಗವ್ವನ ಸ್ಥಿತಿಯನ್ನು ನೋಡಿ ಬಂಡೆಗಲ್ಲುಗಳಿಗ ಕೂಡ ಅಂದು ದ್ರವವುಂಟಾಗುವಂತಿತ್ತು; ಆದರೆ ಕಲ್ಲಿಗಿಂತಲೂ ಕಠಿಣ ಹೃದಯವುಳ್ಳವಳಾದ ಸಾವಕ್ಕನಿಗೆ ಆ ಬಗ್ಗೆ ಏನೂ ಅನಿಸಲಿಲ್ಲ.

"ಚಿಗವ್ವಾ, ನಾಳೆ ನಾನು ಸಾಲೆಗೆ ಹೋಗಲೋ ಬೇಡವೋ?" ಎಂದು ಊಟ ಮುಗಿಯುತ್ತಬರಲು ಹೇಮಾದ್ರಿಯು ಅಂಜುತ್ತಂಜುತ್ತ ಶಂಕರಪ್ಪನಿಗೆ ಮೆಲ್ಲನೆ ಕೇಳಿದನು.

"ಹೋಗಿರಿ-ನೀವು ಹೋಗದಿದ್ದರೆ ಸಾಲೆಯು ಹಾಳೇ ಬಿದ್ದೀತಲ್ಲವೆ? ಸಾಲೇ ಕಲಿತು ತಾವು ದಿಗ್ಗಜರು ಮಾಡಬೇಕಾಗಿದೆಯೇನು? ನಾಳೆನಿಂದ ನಾವು ಸಾಲೆಗೆ ಹೋಗುವ ಕಾರಣವಿಲ್ಲ. ಈ ವರೆಗೆ ಕಲಿತದ್ದು ಸಾಕಾಗಿತು. ನಾಳೆ ಬೆಳಗ್ಗೆ

ಎದ್ದ ಕೂಡಲೆ ಆ ಬಸಲಿಂಗಪ್ಪನವರ ಗಿರಣಿಗೆ ಹೋಗಿ ಯಾವದೊಂದು ಕೆಲಸ ಮಾಡಹತ್ತು. ತಿಳಿಯಿತೇ'' ಎಂದು ಹೇಮಾದ್ರಿಯ ಪ್ರಶ್ನೆಗೆ ಶಂಕರಪ್ಪನು ಉತ್ತರ ಕೊಡುವ ಮೊದಲೇ ಸಾವಕ್ಕನು ಆಕ್ರೋಶದಿಂದ ಗರ್ಜಿಸಿದಳು.

ಎಲ್ಲರ ಊಟವೂ ಮುಗಿಯಿತು. ಚಿಗವ್ವನು ಉಂಡು ಬಸವ್ವನೊಡನೆ ಮೇಲುಪ್ಪರಿಗೆಯಮೇಲೆ ಹೋದಬಳಿಕ ಚನ್ನವ್ವನು ಅಡಿಗೆಯ ಮನೆಯೊಳಗಿನ ಕೆಲ ಸಗಳನ್ನೆಲ್ಲ ತೀರಿಸಿ, ಹೇಮನ ಸಹಾಯದಿಂದ ಕಸಮುಸರಿಗಳನ್ನು ಮಾಡಹತ್ತಿದಳು. ಹಚ್ಚಡವನ್ನು ಹೊತ್ತುಕೊಂಡು ಹುಡುಗರ ಸೋಬತಿಗಾಗಿ ಕೋಣೆಯ ಬಾಗಿಲಲ್ಲಿ ಕುಳಿತಿದ್ದ ಗಂಗವ್ವನು ವಿಚಾರಮಗ್ನಳಾಗಿದ್ದಳು. ಊಟವಾದ ಬಳಿಕ ತನ್ನ ಹೆಂಡತಿಯ ನಾಳಿನ ಪ್ರಯಾಣದ ಸಿದ್ಧತೆಗಾಗಿಯೂ, ಹೇಮಾದ್ರಿಯನ್ನು ಕಾರಖಾನೆ ಯಲ್ಲಿಡುವ ಜೋಡಣಿಗಾಗಿಯೂ ಶಂಕರಪ್ಪನು ಹೊರಗೆ ಹೋಗಿದ್ದನು. ಆ ಎರಡೂ ಸಂಗತಿಗಳ ಸಿದ್ಧತೆಯಾದ ಬಳಿಕ ಆತನು ಮೆಲ್ಲಮೆಲ್ಲನೆ ಮನೆಗೆ ಬರಹತ್ತಿದ್ದನು. ಆಗ ಅವನನ್ನು ಹಿಂದಿನಿಂದ ಯಾರೋ ಕರೆದಂತಾಗಲು, ಶಂಕರಪ್ಪನು ಹಿಂದಿರುಗಿ ನೋಡುವಷ್ಟರಲ್ಲಿ,

''ಶಂಕರಪ್ಪನವರೇ, ಇಷ್ಟು ರಾತ್ರಿಯಲ್ಲಿ ಇತ್ತ ಯಾವ ಕಡೆಗೆ ಹೋಗೋಣ ವಾಗಿತ್ತು? ವಿಶೇಷವೇನಾದರೂ ಇರುವದೇನು? ''

''ಛೇ, ಹಾಗೇನೂ ಇಲ್ಲ. ಈಚೆಗೆ ಹಣವು ಯಾರಲ್ಲಿದೆ?''

''ಅದೇ ಆ ಹಣದ ಬೇಟೆಗಾಗಿ ಹೋಗೋಣಾಗಿತ್ತೇನು?''

'' ಛೇ, ಗೃಹಸ್ಥಾ ಹಾಗಲ್ಲ. ನಿನಗೆ ಯಾವಾಗಲೂ ಬೇಟೆಯ ಧ್ಯಾನವೇ ಧ್ಯಾನವು ''

'' ಹಾಗಲ್ಲದಿದ್ದರೆ ಶಂಕರಪ್ಪನವರೇ ಈಚೆಗೆ ತಾವು ಕ್ಲಬ್ಬಿನ ಕಡೆಗೆಲ್ಲ ಸುಳಿ ಯುವದೇ ಇಲ್ಲವಲ್ಲ? ಮನೆಯವರ ಪಹರೆಯು ಹೆಚ್ಚಾಗಿದೆಯೋನು? ''

'' ಮನೆಯವರದೇನು, ಹೊರಗಿನವರದೇನು? ಕೈಯೊಳಗೇ ಕಾಸಿಲ್ಲದಬಳಿಕ ಕಾತೀ ಯಾತ್ರೆಯ ಸುದ್ದಿಯೇತಕ್ಕೆ? ''

''ಎಲ ಇವರ, ಈ ಮಾತನ್ನು ನೀವು ನನಗೆ ಇಷ್ಟುದಿನವೇಕೆ ತಿಳಿಸಲಿಲ್ಲ? ನೀವು ಬಹಳೇ ಭಿಡಸ್ತರು ಬಿಡಿರಿ. ಏನಿರಿ, ಶಂಕರಪ್ಪ, ಮಿತ್ರರೆದುರಿಗೆ ಈ ಪ್ರಕಾರದ ಸಂಕೋ ಚವೇ? ಇವೊತ್ತು ನಿಮಗೆ ಹಣದ ಕೊರತೆಯಾದರೆ ನಾಳೆ ನಮಗೂ ಆಗತಕ್ಕದ್ದೇ; ಇದು ಪ್ರಪಂಚದಲ್ಲಿ ದಿನಾಲು ನಡೆಯುತಕ್ಕ ವ್ಯವಹಾರವೇ ಆಗಿದೆ '' ಎಂದಂದು ಶಂಕರಪ್ಪನವರ ಮಿತ್ರನೆಂದೆನಿಸಿಕೊಳ್ಳುವ ಒಬ್ಬ ಗೃಹಸ್ಥನು ಆತನನ್ನು ಒತ್ತಾಯ

ದಿಂದ ತನ್ನೊಡನೆ ಕರೆದೊಯ್ದನು. ಅವರಿಬ್ಬರೂ ಸಮೀಪದ ಒಂದು ಗಡಂಗ ವನ್ನು ಹೊಕ್ಕರು. ತನ್ನ ಖರ್ಚಿನಿಂದಲೇ ಅವನು ಶಂಕರಪ್ಪನಿಗೆ ಮೂರು-ನಾಲ್ಕು ಪಾತ್ರೆಸೆರೆಯನ್ನು ಕುಡಿಸಿ, ಅವನಿಂದ ಮನೆಯಲ್ಲಿ ನಡೆದ ಎಲ್ಲ ಸಂಗತಿಗಳನ್ನೂ ಹೊರಗೆಡವಿಕೊಂಡನು. ತನ್ನ ತಂದೆಯಿಂದ ಐನೂರು ರೂಪಾಯಿ ತರುವದಕ್ಕಾಗಿ ಶಂಕರಪ್ಪನ ಹೆಂಡತಿಯು ನಾಳೆ ತವರುಮನೆಗೆ ಹೋಗುವಳೆಂಬ ಸಂಗತಿಯು ತಿಳಿದಕೂಡಲೆ ಆ ಮಿತ್ರಮಹಾಶಯನಿಗೆ ಒಳ್ಳೇ ಆನಂದವಾಯಿತು. ಯಾಕಂ ದರೆ ಈಚೆಗೆ ಎಷ್ಟೋ ದಿನಗಳಿಂದ ಹೆಂಡತಿಯ ಸದುಪದೇಶದ ಮೇರೆಗೆ ಶಂಕರಪ್ಪನು ತನ್ನ ಮಿತ್ರರೊಡನೆ ಗಂಡಂಗದಲ್ಲಿ ಸೇರಿ, ಮದಿರಾಪಾನವನ್ನು ಮಾಡುತ್ತಿರಲಿಲ್ಲ. ಮಾಡುವದೇ ಆದರೆ ಮನೆಗೆ ತಂದು ಮಾಡುವ ಪರಿಪಾಠವನ್ನಿಟ್ಟುಕೊಂಡಿದ್ದನು. ಹೆಂಡತಿಯು ತವರೂರಿಗೆ ಹೋದಬಳಿಕ ಈತನನ್ನು ಪುನಃ ತನ್ನ ಜಾಲದಲ್ಲಿ ಎಳೆದು ಕೊಳ್ಳಲಿಕ್ಕೆ ಸುಲಭವಾಗುವದೆಂದು ಶಂಕರಪ್ಪನ ಆ ಮಿತ್ರನಿಗೆ ಅನಿಸಿ, ಅದರಿಂದ ಆಗ ಅವನಿಗೆ ತುಂಬಾ ಸಂತೋಷವಾಯಿತು.

ಶಂಕರಪ್ಪನು ಮನೆಗೆ ಬಂದಾಗ ರಾತ್ರಿಯ ಹತ್ತುಹೊಡೆದುಹೋಗಿತ್ತು. ಮಕ್ಕಳ ಕೆಲಸಗಳು ಯಾವಾಗ ಮುಗಿಯುವವೋ ಎಂದು ಹಾದೀ ನೋಡುತ್ತ ಹಚ್ಚ ಡವನ್ನು ಹೊದ್ದುಕೊಂಡ ಗಂಗವ್ವನು ಚಳಿಯಿಂದ ನಡುಗುತ್ತ ಬಾಗಿಲಲ್ಲಿಯೇ ಕುಳಿತಿದ್ದಳು. ಇಷ್ಟರಲ್ಲಿ ತಲೆಬಾಗಿಲ ತೆರೆದು ಶಂಕರಪ್ಪನು ಮೆಲ್ಲಗೆ ಒಳಸೇರಿದನು. ಅಲ್ಲಿಯ ಮಂದ ಪ್ರಕಾಶದಿಂದಲೂ, ಹೆಚ್ಚಾಗಿ ಮದವೇರಿದ್ದರಿಂದಲೂ ಕೋಣೆಯ ಬಾಗಿಲಲ್ಲಿ ಕುಳಿತಿರುವವರ ಗುರ್ತು ಅವನಿಗೆ ಚನ್ನಾಗಿ ಹತ್ತಲಿಲ್ಲ. ಹೊರಗಿ ನಿಂದ ಬರಲಿಕ್ಕೆ ತನಗೆ ತಡವಾಯಿತೆಂದು ತನ್ನ ಪ್ರಿಯಪತ್ನಿಯೇ ತನ್ನ ದಾರೀ ಕಾಯುತ್ತ ಇಲ್ಲಿ ಕುಳಿತಿರುವಳೆಂದು ಶಂಕರಪ್ಪನಿಗೆ ಭಾಸವಾದದ್ದರಿಂದ ಆತನು ಅಲ್ಲಿ ಕುಳಿತವರನ್ನು ಕುರಿತು—“ ಪ್ರಿಯೇ, ಇನ್ನೂ ನೀನು ಇಲ್ಲಿಯೇ ಕುಳಿತಿರು ವೆಯೇನು? ” ಎಂದನು.

ಗಂಗವ್ವನು ತನ್ನ ಕಡೆಗೆ ಮೋರೆ ತಿರುವಿದಕೂಡಲೆ, ಶಂಕರಪ್ಪನಿಗೆ ವಜ್ರಾ ಘಾತವಾದಂತಾಯಿತು. ತನ್ನಿಂದ ಭಯಂಕರ ಪ್ರಮಾದವಾಯಿತೆಂಬದು ಆಗ ಅವನ ಲಕ್ಷ್ಯಕ್ಕೆ ಬಂತು. ಕೂಡಲೆ ಅವನು ನೆಟ್ಟಗೆ ಅಟ್ಟದ ದಾರಿಯನ್ನು ಹಿಡಿದನು. ತನ್ನ ಮೈದುನನ ಬಾಯಿಂದ ಹೊರಟ ಆ ಶಬ್ದಗಳನ್ನು ಕೇಳಿ ಗಂಗವ್ವನು ಮೊದಲು ಆಶ್ಚರ್ಯಚಕಿತಳಾದಳು. ಆದರೆ ಆತನ ತಪ್ಪು ತಿಳುವಳಿಕೆಯ ಜ್ಞಾನವು ಅವಳಿಗೊಮ್ಮೆಲೆ ಆಯಿತು. ಇಲ್ಲಿ ನೆಗೆಣ್ಣಿಯು ಕುಳಿತಿರುವಳೆಂದು ತಿಳಿದೇ ತನ್ನ

ಮೈದುನನು ಹೀಗೆ ನುಡಿದನೆಂಬದು ಅವಳಿಗೆ ಗೊತ್ತಾಯಿತು. ಕಸ-ಮುಸುರಿಗಳಾದಕೂಡಲೆ ಹೇಮಾದ್ರಿ ಹಾಗು ಚಿನ್ನವ್ವ ಇವರು ಅವಳ ಒಳಿಗೆ ಬಂದರು. ಚಿಗಪ್ಪನು ತಮ್ಮ ಅವ್ವನೊಡನೆ ಏನೋ ಮಾತಾಡಿದನೆಂಬದನ್ನು ದೂರಿನಿಂದಲೇ ಆ ಹುಡುಗರು ಕೇಳಿದ್ದರು. ತಮ್ಮ ಅವ್ವನೊಡನೆ ಚಿಗಪ್ಪನು ಈ ವರೆಗೆ ಎಂದೂ ಮಾತಾಡಿದ್ದಿಲ್ಲವಾದ್ದರಿಂದ ಇಂದು ಅವರಿಗೆ ಬಹಳ ಸೋಜಿಗವೆನಿಸಿತು.

"ಅವ್ವಾ, ಚಿಗಪ್ಪನು ಇಂದು ನಿನ್ನೊಡನೇನೆಂದು ಮಾತಾಡಿದನವ್ವ!" ಎಂದು ಚಿನ್ನವ್ವನು ಮೆಲ್ಲನೆ ತಾಯಿಯನ್ನು ಕೇಳಿದಳು.

"ಅವರು ಮಾತಾಡಿದ್ದು ನನ್ನನ್ನುದ್ದೇಶಿಸಿದ್ದಲ್ಲ. ನಿಮ್ಮ ಚಿಗವ್ವನೇ ಇಲ್ಲಿ ಕುಳಿತಿರುವಳೆಂಬ ಅನುಮಾನದಿಂದ ಅವರು ಮಾತಾಡಿದರು" ಎಂದೆಂದು ಆ ಸಾಧ್ವಿಯು ತನ್ನ ಮಕ್ಕಳೊಡನೆ ಒಳಗೆ ಹೋಗಿ ಬಾಗಿಲವನ್ನಿಕ್ಕಿ ಮಲಗಿಕೊಂಡಳು.

ಗಂಗಮ್ಮನು ತನ್ನ ಮುರುಕ ಹೊರಸಿನಮೇಲೆ ಬಿದ್ದುಕೊಂಡಳು. ಮೂಲೆಯಲ್ಲಿ ಸುರುಳಿ ಸುತ್ತಿಟ್ಟಿದ್ದ ಚಾಪೆಯನ್ನು ಚಿನ್ನವ್ವನು ಹೊರಸಿನ ಬದಿಯಲ್ಲಿ ನೆಲಕ್ಕೆ ಹಾಸಿದಳು. ಆ ಚಾಪೆಯಮೇಲೆಯೇ ದಿನಾಲು ಆ ಬಂಧು-ಭಗಿನಿಯರು ಮಲಗುತ್ತಿದ್ದರು. ಗೂಡಿನಲ್ಲಿ ಚಿಮಣಿಯು ಇನ್ನೂ ಉರಿಯುತ್ತಿದ್ದು, ಅದರ ಮಿಣುಕು-ಮಿಣುಕಾದ ಪ್ರಕಾಶವು ಅಲ್ಲಿಯೇ ಇದ್ದ ಹೇಮಾದ್ರಿಯ ಪಾಟಿ-ಪುಸ್ತಕಗಳ ಮೇಲೆ ಬಿದ್ದಿತ್ತು. ಅವುಗಳನ್ನು ನೋಡಿ ಹೇಮನು ಚಿನ್ನವ್ವಳಿಗೆ ಅಂದನು "ಆಯಿತು, ನಮ್ಮ ಶಿಕ್ಷಣವು ಮುಗಿದಂತಾಯಿತು; ಇನ್ನು ಇವುಗಳಿಗೆ ಶಾಶ್ವತವಾದ ವಿಶ್ರಾಂತಿಯು ದೊರೆದಂತಾಯಿತು" ಎಂದು ಗುಣುಗುಟ್ಟಿದನು.

ಬಳಿಕ ಅವರೀರ್ವರೂ ಆ ಚಾಪೆಯಮೇಲೆ ಮಲಗಿಕೊಂಡರು. ಹೇಮನ ಮನಸ್ಸಿನಲ್ಲಿ ತನ್ನ ಶಿಕ್ಷಣದ ಹಾಗು ಗಿರಣಿಯೊಳಗಿನ ಕೆಲಸದ ವಿಚಾರಗಳೂ, ಚಿನ್ನವ್ವನ ಮನಸ್ಸಿನಲ್ಲಿ ತನ್ನ ತಾಯಿಯ ಶೋಚನೀಯ ಸ್ಥಿತಿಯ ವಿಚಾರವೂ ನಡೆದಿದ್ದವು. ಇಬ್ಬರಿಗೂ ಎಷ್ಟು ಹೊರಳಿ ಮಲಗಿದರೂ ನಿದ್ರೆಯೇ ಹತ್ತಲೊಲ್ಲದು. ಅವರು ಇತ್ತಿಂದ ಅತ್ತ, ಅತ್ತಿಂದ ಇತ್ತ ಹೀಗೆ ಒಂದೇಸವನೆ ಹೊರಳಾಡುತ್ತಿದ್ದರು. ಮಕ್ಕಳು ಹೀಗೆ ಹೊರಳಾಡುವದರ ಕಡೆಗೆ ಗಂಗಮ್ಮನ ಲಕ್ಷ್ಯವಿತ್ತು. ಹುಡುಗರು ಇಂದು ವಿಶೇಷ ದಣಿದಿರುವದರಿಂದ ಇವರಿಗೆ ಬೇಗನೆ ನಿದ್ರೆ ಹತ್ತುವದೆಂದು ಅವಳು ಮೊದಲು ಭಾವಿಸಿಕೊಂಡಿದ್ದಳು; ಆದರಿಂದ ಅವಳು ಎಷ್ಟೋ ಹೊತ್ತಿನ ವರೆಗೆ ಏನೂ ಮಾತಾಡಲಿಲ್ಲ. ಆದರೆ ಮಲಗಿ ಒಂದು ತಾಸು ಆಯಿತು; ಎರಡು

ತಾಸು ಆಯಿತ.; ಮೂರು ತಾಸು ಆದರೂ ಹುಡುಗರಿಗೆ ನಿದ್ರೆ ಬಾರದ್ದನ್ನು ಕಂಡು ಆಕೆಯಿಂದ ಸುಮ್ಮನೆ ಬಿದ್ದುಕೊಳ್ಳುವದಾಗಲಿಲ್ಲ. ಆಗ ಆಕೆಯು ಮೆಲ್ಲಗೆ—" ಹೇಮಾ, ತಮ್ಮಾ ಹೇಮಾದ್ರಿ, ಇಂದು ನಿನಗೆ ನಿದ್ರೆಯೇಕೆ ಹತ್ತಲೊಲ್ಲದಪ್ಪಾ?"

ಹೇಮ—" ಅವ್ವಾ, ಯಾಕೋ ನನಗಿಂದು ನಿದ್ರೆಯೇ ಬರಲೊಲ್ಲದು ನೋಡು. "

ಗಂಗ—" ತಮ್ಮಾ ಇತ್ತ ಬಾ, ನೋಡೋಣ, ನಿನ್ನ ಕಾಲು ಹ್ಯಾಗಾಗಿದೆಯೆಂಬುದನ್ನು? "

ಹೇಮ—"ಅವ್ವಾ, ನಾನದಕ್ಕೆ ಒದ್ದೆಯ ಅರಿವೆಯನ್ನು ಸುತ್ತಿದ್ದೇನೆ. ಅದರಿಂದ ನೋವು ಕಡಿಮೆಯಾಗಿದೆ. ಆದರೆ ಅವ್ವಾ, ನನ್ನ ಸಾಲೆ... "ಇದಕ್ಕಿಂತಲೂ ಹೆಚ್ಚು ಹೇಮಾದ್ರಿಯ ಬಾಯಿಂದ ಆಗ ಶಬ್ದಗಳು ಹೊರಡಲಿಲ್ಲ. ಅವನು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಅಣ್ಣನ ಆ ಕರುಣಾಜನ್ಯಸ್ಥಿತಿಯನ್ನು ಕಂಡು ಚಿನ್ನವ್ವನೂ ಎದ್ದು ಕುಳಿತಳು. ಗಂಗವ್ವನು ಹೇಮಾದ್ರಿಯನ್ನು ಹತ್ತರ ಕರೆದುಕೊಂಡು ಅವನ ಬೆನ್ನಮೇಲೆ ಕೈಯಾಡಿಸಿದಳು. ತಾಯಿಯು ಪ್ರೇಮದಿಂದ ಕೈಯಾಡಿಸುವದರಿಂದ ಹೇಮನ ದುಃಖವು ಒತ್ತರಿಸಿತು. ಆದರೆ ಆತನ ತಲೆಯೊಳಗಿನ ವಿಚಾರಗಳು ಮಾತ್ರ ಬಯಲಾದವು. ಕುಸಹೊತ್ತಿನ ಮೇಲೆ ಗಂಗವ್ವನು—"ತಮ್ಮಾ, ಚಿಗವ್ವನು ಸಿಟ್ಟುಮಾಡಿದಳೆಂದು ನೀನು ನಿನ್ನ ಪುಸ್ತಕಗಳ ಕಡೆಗೆ ವಕ್ರದೃಷ್ಟಿಯಿಂದೇಕೆ ನೋಡಬೇಕು? ಇಂದಿಲ್ಲ ನಾಳೆ ಯಾವಾಗಾದರೂ ಉದ್ಯೋಗ-ಧಂಡೆ ಮಾಡುವ ಸಲುವಾಗಿ ನೀನು ಸಾಲೆಯನ್ನು ಬಿಡಲೇಬೇಕಾಗುವದಲ್ಲವೆ? ಅಂದಬಳಿಕ ಈಗ ಆಬಗ್ಗೆ ಚಿಂತಿಸುತ್ತ ಕುಳಿತರೆ ಹೇಗೆ ನಡೆದೀತು? ಇಷ್ಟು ಚಿಕ್ಕವಯಸ್ಸಿನಲ್ಲಿಯೇ ನಿನಗೆ ಗಿರಣಿಯಲ್ಲಿ ಕೆಲಸಕ್ಕೆ ಹೋಗಬೇಕಾಗುವದು ಅನುಚಿತವಾಗಿದ್ದರೂ ನಮ್ಮ ಸ್ಥಿತಿಗತಿಗಳ ಕಡೆಗೆ ಲಕ್ಷ್ಯಗೊಟ್ಟು ನಾವು ನಡೆಯಬೇಕಲ್ಲವೇ? ಗಿರಣಿಯ ಕೆಲಸಕ್ಕೆ ಹೋಗಹತ್ತಿದ ಮಾತ್ರದಿಂದ ಪುಸ್ತಕಗಳಿಗೆ ಕಾಯಂ ವಿಶ್ರಾಂತಿಯನ್ನು ಕೊಡಬೇಕೆಂಬ ನಿಯಮವಿಲ್ಲ; ಮತ್ತು ಆ ಬಗ್ಗೆ ಖೇದಪಡುವ ಕಾರಣವೂ ಇಲ್ಲ. ಎಷ್ಟೋ ಹೆಸರುವಾಸಿಗಳಾದ ಮಹಾಪುರುಷರು ಚಿಕ್ಕಂದಿನಲ್ಲಿಯೇ ಉದ್ಯೋಗ ಮಾಡಿ ತಮ್ಮ ಹಾಗು ತಮ್ಮವರ ಹೊಟ್ಟೆ ಹೊರಕೊಳ್ಳುತ್ತ ತಮ್ಮ ಶಿಕ್ಷಣವನ್ನು ಪೂರೈಸಿಕೊಂಡಿರುವರು. ತಮ್ಮಾ, ನೀನೇ ನನಗೆ ಆಧಾರಸ್ತಂಭನು. ನಾನು ಗಟ್ಟಿಮುಟ್ಟೆಯಾಗಿದ್ದರೆ, ಮಂದಿಯ ಮನೆಯ ಕುಟ್ಟು-ಬೀಸುವದನ್ನು ಮಾಡಿಯಾಗಲಿ ನಿನ್ನ ಶಿಕ್ಷಣಕ್ಕೆ ನೆರವಾಗುತ್ತಿದ್ದೆನು. ಆದರೆ ನಾನು

ಹೀಗೆ ಹಾಸಿಗೆ ಹಿಡಿದು ಬಿದ್ದುಕೊಂಡಿರುವದರಿಂದ ನಿರುಪಾಯವಾಗಿದೆ. ಚಿಗವ್ವನು ನಿನಗೆ ಗಿರಣಿಗೆ ಹೋಗಹೇಳಿದಳೆಂದು ನೀನು ಅವಳ ಮೇಲೆ ಸಿಟ್ಟಾಗಬಾರದು. ಅವರ ಮೇಲೆ ನಮ್ಮ ಮೂವರ ಹೊಟ್ಟೆ-ಬಟ್ಟೆಗಳ ಭಾರವಿಲ್ಲೇನು? ಗಿರಣಿಗೆ ಹೋಗಿ ನೀನು ನಾಲ್ಕು ದುಡ್ಡು ಗಳಿಸಹತ್ತಿದರೆ ಅಷ್ಟೇ ನಿಮ್ಮ ಚಿಗಪ್ಪನಿಗೆ ಸಹಾಯವಾಗುವದು. ಹುಚ್ಚಾ, ಸಾಲೀಬಿಡಿಸಿದ ಮಾತ್ರದಿಂದ ಹತಾಶವಾದರೆ ಹೇಗೆ ನಡೆದೀತು? ತಮ್ಮಾ, ನಿನ್ನ ಸ್ಥಿತಿಯು ಇನ್ನೂ ಎಷ್ಟೋ ಬೇಕು. ನಿನಗೆ ಮಮತೆಯ ನಿಮ್ಮ ಚಿಗಪ್ಪನಾದರೂ ಇರುತ್ತಾನೆ; ಆದರೆ ಲೋಕದೊಳಗೆ ಯಾರ ಆಧಾರವೂ ಇಲ್ಲದ ಎಷ್ಟೋ ಹುಡುಗರು ಮನೆಮನೆ ತಿರುಗಿ ಬಿಕ್ಕೆಬೇಡಿ ಓಣಿಯೊಳಗಿನ ಮುನಸಿಪಾಲಟಿಯ ಲಾಂದರದ ಬೆಳಕಿನಲ್ಲಿ ಓದಿ ಪಂಡಿತರಾಗಿ ಜಗದ್ವಂದ್ಯರಾದದ್ದರ ಕಡೆಗೆ ನೀನು ಲಕ್ಷ್ಯಗೊಡು. ಹತಾಶವಾಗುವ ಪ್ರಸಂಗಗಳೆಲ್ಲ ಮನುಷ್ಯನ ಪರೀಕ್ಷೆಯ ಸಮಯಗಳಾಗಿರುತ್ತವೆ. ಯಾವನು ಆ ಪ್ರಸಂಗಗಳಿಗೆ ಎದೆಗೊಟ್ಟು ನಡೆಯುವನೋ, ಅವನೇ ನಿಜವಾದ ಮನುಷ್ಯನು; ಆತನೇ ಮನುಷ್ಯರ ಕರ್ತವ್ಯವನ್ನು ಬಲ್ಲಂಥವನು ''

ಈ ಪ್ರಕಾರ ಆ ಸಾಧ್ವಿಯು ಎಷ್ಟೋ ಧೈರ್ಯದ ಹಾಗು ಹುರುಪಿನ ಮಾತುಗಳನ್ನು ಹೇಳಿ ಹೇಮಾದ್ರಿಯ ಮನಸ್ಸನ್ನು ಸಿದ್ಧಮಾಡಿದಳು. ಬಳಿಕ ಅವಳು ಚಿನ್ನವ್ವನನ್ನು ಹತ್ತರಕ್ಕೆ ಒರಮಾಡಿಕೊಂಡಳು. ಆಗ ಚಿನ್ನವ್ವನ ವಯಸ್ಸು ಒಂಬತ್ತು ತುಂಬಿತ್ತು ಮಾತ್ರ; ಆದರೆ ಆ ವಯೋಮಾನದಿಂದ ಆ ಹುಡುಗಿಯು ಒಳ್ಳೇ ತಿಳುವಳಿಕೆಯವಳೂ ಹುಷಾರಳೂ ಆಗಿದ್ದಳು.

ಗಂಗಮ್ಮ—''ತಂಗೀ, ಇಂದು ಎಲ್ಲ ಮುಸುರಿಗಳನ್ನು ತೊಳೆದದರಿಂದ ದಣಿದೆಯಷ್ಟೇ?''

ಚಿನ್ನವ್ವ—''ಇಲ್ಲ, ಅವ್ವಾ ಇಲ್ಲ; ಚಿಗವ್ವನು ಯಾವ ಕೆಲಸವನ್ನೂ ಮಾಡಗೊಡುವದಿಲ್ಲೆಂದು ನನಗೆ ಖೇದವಾಗುತ್ತದೆ. ಇಲ್ಲದಿದ್ದರೆ ಯಾವ ಕೆಲಸವೂ ನಿನಗೆ ಹತ್ತದ ಹಾಗೆ ನಾನೇ ಎಲ್ಲ ಕೆಲಸಗಳನ್ನು ನೀಗಿಸಿಕೊಂಡೇನು. ಅವ್ವಾ, ನಿನಗೀಗ ಹೇಗೆ ಅನಿಸುತ್ತದೆ?'' ''ತಂಗೀ ಈಗ ನನಗೆ ತುಸ ಸಮಾಧಾನವೆನಿಸುತ್ತದೆ.'' ಎಂದು ಮಗಳ ಪ್ರಶ್ನೆಗೆ ಗಂಗಮ್ಮನು ಸದ್ಗದಿತ ಕಂಠದಿಂದ ಉತ್ತರ ಕೊಟ್ಟಳು. ಬಳಿಕ ಅವಳು ಕ್ಷೀಣಸ್ವರದಿಂದ—''ಚಿನ್ನೀ. ನಿನಗೀಗ ನಾನು ಕೆಲವು ಮಾತುಗಳನ್ನು ಹೇಳುತ್ತೇನೆ ತಮ್ಮಾ ಹೇಮಾ, ನಿದ್ದೆ ಹತ್ತಿಲ್ಲವಷ್ಟೇ?

ಹೇಮ—ಅವ್ವಾ, ಇಂದು ನನಗೆ ನಿದ್ದೆ ಬರುವದಿಲ್ಲ. ಹೇಳು, ನಾನು ಲಕ್ಷ್ಯಗೊಟ್ಟು ಕೇಳುತ್ತಲಿದ್ದೇನೆ.

ಗಂಗವ್ವ—ತಂಗೀ ನಾಳಿನಿಂದ ನಾನು ಬಹುಶಃ ಈ ಕೋಣೆಯಿಂದ ಹೊರಹೊರಟೇನೆಂಬ ಲಕ್ಷಣವು ತೋರುವದಿಲ್ಲ. ಆಗಲೆ ನಾನು ಬಾಗಿಲಲ್ಲಿ ಕುಳಿತಾಗ ನನ್ನ ಮನಸ್ಸಿನಲ್ಲಿ ಇದೇ ವಿಚಾರವು ಬಂದಿತ್ತು. ಸತ್ತು-ಕೆಟ್ಟು ಈವರೆಗೆ ನಾನು ಈ ಮನೆಗೆಲಸಗಳನ್ನು ಹ್ಯಾಗಾದರೂ ನೀಗಿಸಿದೆನು; ಆದರೆ ಇನ್ನುಮುಂದೆ ಆ ಕೆಲಸ ಮಾಡಲಿಕ್ಕೆ ನನ್ನ ಮೈಯಲ್ಲಿ ಶಕ್ತಿಯೇ ಉಳಿದಿರುವದಿಲ್ಲ. ನನಗೆ ಕ್ಷಯ ರೋಗವಾಗಿರುತ್ತದೆ ನಾನು ಹೀಗೆ ಹೊರಸು ಹಿಡಿದು ಬಿದ್ದುಕೊಂಡನೆಂದರೆ, ತಂಗೀ, ನಾನು ಮಾಡುತ್ತಿರುವ ಎಲ್ಲ ಕೆಲಸಗಳನ್ನು ನೀನೇ ಮಾಡಬೇಕಾಗುವದು, ಎಂದೆಂದು ಅವಳು ತುಸ ತಡೆದಳು.

ಚಿನ್ನ—ನೀನು ಅಶಕ್ತಳಾಗಿರುವೆಯೆಂದು ನಾನು ನಿನ್ನ ಎಲ್ಲ ಕೆಲಸಗಳನ್ನು ಮಾಡಬೇಕೆಂದು ಹಾತೊರೆಯುತ್ತೇನೆ; ಆದರೆ ಅವ್ವಾ, ಚಿಗವ್ವನು ನನಗೆಲ್ಲಿ ಅವನ್ನು ಮಾಡಗೊಡುತ್ತಾಳೆ?

ಮಗಳ ಮಾತಿನ ಹೊಲಬು ಗಂಗವ್ವನ ಲಕ್ಷ್ಯದಲ್ಲಿ ಬಂತು. ತನಗೆ ಕ್ಷಣ ಹೊತ್ತು ಸಹ ವಿಶ್ರಾಂತಿ ದೊರೆಯಬಾರದೆಂದೂ, ಎಲ್ಲ ಮನೆಗೆಲಸಗಳನ್ನು ತನ್ನಿಂದಲೇ ಮಾಡಿಸಿಕೊಳ್ಳಬೇಕೆಂದೂ, ಶಕ್ಯವಿದ್ದಷ್ಟು ತನ್ನನ್ನು ಪೀಡಿಸಬೇಕೆಂದೂ ಇದ್ದ ಸಾವಕ್ಕನ ಉದ್ದೇಶವು ಗಂಗವ್ವನಿಗೆ ತಿಳಿದಿದ್ದಿಲ್ಲವೆಂತಲ್ಲ. ಈ ಉದ್ದೇಶಕ್ಕಾಗಿಯೇ ಚಿನ್ನವ್ವನು ಯಾವ ಕೆಲಸಮಾಡಹೋದರೂ ಸಾವಕ್ಕನು ಅದನ್ನು ನಿಷೇಧಿಸುತ್ತಿದ್ದಳು.

"ಸುಭದ್ರೇ, ನೀನು ಇವತ್ತು ಬಾಲಿಕೆಯಾಗಿರುವದರಿಂದ ನಿಮ್ಮ ಚಿಗವ್ವನು ಕೆಲಸ ಮಾಡಬೇಡೆಂದು ನಿನಗನ್ನುವಳು," ಎಂದು ಮಗಳಲ್ಲಿ ಚಿಗವ್ವನ ವಿಷಯವಾಗಿ ದುರಭಿಪ್ರಾಯವಾಗಬಾರದೆಂದು ಗಂಗವ್ವನು ನುಡಿದು,—ಇನ್ನು ನಾನು ಹಾಸಿಗೆಯನ್ನೇ ಹಿಡಿದು ಮಲಗಿದ ಬಳಿಕ, ಅನಿವಾರ್ಯವೆಂದು ನೀನೇ ಎಲ್ಲ ಕೆಲಸ ಮಾಡಬೇಕಾಗುವದು. ಆಗ ಚಿಗವ್ವನು ನಿನಗೆ ಬೈಯುತ್ತಾಳು; ಅಂದಾಳು; ಆದರೆ ಅವರು ಹಿರಿಯರಿರುವದರಿಂದ ಅವರು ಅಂದ ಬಗ್ಗೆ ನೀನು ಸಿಟ್ಟಾಗಬಾರದು. ತಾವು ತಪ್ಪು ಕೆಲಸ ಮಾಡದ ಹೊರತು ಯಾರೂ ತಮಗೆ ಅನ್ನುವದಿಲ್ಲ; ಎಂಬದನ್ನು ನೆನಸಿಟ್ಟುಕೊ; ಚಿಗವ್ವನಂತೆ ಒಸವ್ವನೂ ನಿನಗೆ ತೊಂದರೆ ಕೊಟ್ಟಾಳು, ಸಿಟ್ಟು

ಮಾಡ್ಯಾಳು; ಆದರೆ ಹಸುಗೂಸಾದ್ದರಿಂದ ಅವಳ ಮಾತಿನ ಕಡೆಗೆ ನೀನು ಲಕ್ಷ್ಯಗೊಡಬಾರದು.

ಹೀಗೆ ಗಂಗವ್ವನು ತನ್ನ ಮಕ್ಕಳಿಗೆ ಅವರಮೇಲೆ ಮುಂದೆ ಬರುವ ಸಂಕಟಗಳ ಹಾಗು ಜವಾಬುದಾರಿಯ ಜ್ಞಾನವನ್ನು ಸವಿಮಾತುಗಳಿಂದ ಮಾಡಿಕೊಟ್ಟಳು. ಆ ಕಾಲಕ್ಕೆ ಅವಳಿಗೆ ಸ್ವಂತಕ್ಕೆ ಎಷ್ಟು ದುಃಖವಾಗಿರಬಹುದೆಂಬದನ್ನು ಬರೆದು ತಿಳಿಸುವ ಸಾಮರ್ಥ್ಯವು ನಮ್ಮ ಲೆಕ್ಕಣಿಕೆಯಲ್ಲಿ ಇರುವದಿಲ್ಲ. ಆ ಸಾಧ್ವಿಯಂಥ ಸ್ಥಿತಿಯನ್ನು ಅನುಭವಿಸಿದ ನಮ್ಮ ಸಹೋದರಿಯರೇ ಅದನ್ನು ಮನಗಾಣಬಹುದು! ತಾನು ಗಟ್ಟಿಮುಟ್ಟಿಯಾಗಿದ್ದು ಮೈಮುರಿ ದುಡಿಯುತ್ತಿರುವಾಗಲೆ, ಯಾವ ಮನೆಯಲ್ಲಿ ತನ್ನ ಹಾಗು ತನ್ನ ಮಕ್ಕಳ ವಿಷಯವಾಗಿ ಇಷ್ಟು ನಿಂದ್ಯಪ್ರಕಾರವು ನಡೆಯುತ್ತಿರುವದೋ, ಅಲ್ಲಿ ತಾನು ನೆಲಹಿಡಿದು ಬಿದ್ದಬಳಿಕ ತಮ್ಮ ಮೇಲೆ ಎಂಥ ಅನನ್ವಿತ ಪ್ರಸಂಗಗಳು ಬರಬಹುದೆಂಬದರ ಜ್ಞಾನವು ಆ ಹಡೆದವ್ವನಿಗೆ ಮೊದಲೇ ಆಗಿತ್ತು. ಆದರೂ ಆ ಮನೆತನಕ್ಕೆ ಹೆಣ್ಣುಮಗಳು ಆ ಸ್ಥಿತಿಯ ಪ್ರತೀಕಾರದ ಯಾವ ಉಪಾಯವನ್ನೂ ಆಲೋಚಿಸದೆ, ತಾನೂ ತನ್ನ ಮಕ್ಕಳೂ ಅದಕ್ಕೆ ಎದೆಗೊಟ್ಟು ನಡೆಯಲಿಕ್ಕೆ ಸಿದ್ಧರಾದರು. ಮಧ್ಯರಾತ್ರಿಯು ದಾಟಿಹೋದರೂ ಆ ತಾಯಿ-ಮಕ್ಕಳ ಸಂಭಾಷಣವು ಮುಗಿಯಲಿಲ್ಲ. ಕಡೆಗೆ ಆ ತಾಯಿಯು—“ಮಕ್ಕಳಿರಾ, ನಾನು ಹೇಳಿರುವದನ್ನು ಸದಾ ಲಕ್ಷ್ಯದಲ್ಲಿಟ್ಟು ನಡೆಯಿರಿ. ನಾಳಿನಿಂದ ನಿಮ್ಮ ಹೊಸ ಬಾಳುವೆಗೆ ಆರಂಭವಾಗುವದೆಂದು ತಿಳಿಯಿರಿ; ಹೋಗಿರಿ, ಇನ್ನು ಸ್ವಸ್ಥವಾಗಿ ಮಲಗಿಕೊಳ್ಳಿರಿ.” ಎಂದು ಬೋಧಿಸಿದಳು.

ತಾಯಿಯ ಪ್ರೇಮಲ ಸದುಪದೇಶದಿಂದ ಆ ಬಂಧು-ಭಗಿನಿಯರಿಗೆ ಹೊಸ ಹುರುಪು ಬಂದಂತಾಯಿತು. ಆದರಿಂದ ಅವರಲ್ಲಿಯ ದುಃಖದ ಕಲ್ಪನೆಗಳೆಲ್ಲ ನಾಮಶೇಷವಾದವು. ಅಂದು ರಾತ್ರಿ ಅವರಿಗೆ ಒಳ್ಳೇ ಗಾಢವಾದ ನಿದ್ರೆಯು ಹತ್ತಿತು.





# [ ೪ ]

ಬೆಳಗಾದ ಕೂಡಲೆ ಮೊದಲಿನ ರಾತ್ರಿ ಗೊತ್ತಾದಂತೆ ಸಾವಕ್ಕನು ಮಗಳೊಡನೆ ತವರೂರಿಗೆ ನಡೆದಳು. ಹೋಗುವಾಗ ಅವಳು ತನ್ನ ಹಿರೇ ನೆಗೆಣ್ಣಿಯಾದ ಗಂಗವ್ವನಿಗೆ ಹೋಗಿಬರುವೆನೆಂದು ಕೂಡ ಹೇಳಿ ಹೋಗಲಿಲ್ಲ. ಮುನ್ನಾದಿನ ರಾತ್ರಿ ಹೇಳಿದಂತೆ ಇಂದಿನಿಂದ ಚಿನ್ನಪ್ಪನ ಹೊಸ ಆಯುಷ್ಯಕ್ಕೆ ಪ್ರಾರಂಭವಾದಂತಾಗಿತ್ತು ಅವಳು ನಸುಕಿನಲ್ಲಿದ್ದು ಮನೆಗೆಲಸ ಮಾಡಲುದ್ಯುಕ್ತಳಾದಳು. ಚಿಗವ್ವನು ಊರಿಗೆ ಹೋಗುವಳೆಂಬದ ಅವರಾರಿಗೂ ಗೊತ್ತಿರಲಿಲ್ಲ. ಮನೆಯ ಬಾಗಿಲಲ್ಲಿ ಕುದುರೆಯ ಬಂಡಿಯು ಬಂದೊಡನೆ ಚಿನ್ನವ್ವನು ಬಸವ್ವನಿಗೆ ಆ ಬಗ್ಗೆ ಕೇಳಿದಳು. ಆದರೆ ಆ ಪೋರಿ ಹುಡುಗೆಯು ಇವಳಿಗೆ ತನ್ನ ಗುಟ್ಟು ಕೊಡ ಬಹುದೇ? ಚಿನ್ನವ್ವ-ಬಸವ್ವ ಇವರಲ್ಲಿ ನಡೆದ ಸಂಭಾಷಣದ ಸುಳುವು ಸಾವಕ್ಕನಿಗೆ ಹತ್ತಲು, ಅವಳು ರಭಸದಿಂದ ಚಿನ್ನವ್ವನಿಗೆ—“ ಚಿನ್ನೀ, ನಿನ್ನಂಥ ಪಿಕನಾಶಿಗೆ ಈ ಸುದ್ದಿಯೇತಕ್ಕೆ ಬೇಕೇ? ಊರ ಸುದ್ದೀ ಕಟ್ಟಿಕೊಂಡು ನೀನು ಮಾಡುವದೇನು? ನಡೆ ನಿನ್ನ ಕೇಸಕ್ಕೆ ” ಎಂದು ಗದ್ದರಿಸಿದಳು.

ಸಾವಕ್ಕನು ಟಾಂಗಾ ಹತ್ತಿ ಹೋದಬಳಿಕ ಶಂಕರಪ್ಪನೂ ಮನೆಯಿಂದ ಹೊರಹೊರಟನು. ದಿನದಂತೆ ಅಡಿಗೆ-ಊಟಗಳ ಸಿದ್ಧತೆ ಮಾಡಿಟ್ಟು ಚಿನ್ನವ್ವನು ಚಿಗಪ್ಪನ ದಾರೀ ಕಾಯುತ್ತ ಕುಳಿತಳು. ಶೇಟಜಿಯ ಅಂಗಡಿಗೆ ಹೋಗುವ ಹೊತ್ತಾದರೂ ಚಿಗಪ್ಪನು ಮನೆಗೆ ಬಾರದೆ ಇರಲು, ಆತನು ಚಿಗವ್ವನೊಡನೆ ಹೋದನೋ ಏನೋ ಎಂದು ಅವಳಿಗೆ ಅನುಮಾನವಾಯಿತು. ಹೇಮಾದ್ರಿಯೂ ಚಿಗಪ್ಪನ ಹಾದೀ ನೋಡುತ್ತ ಮನೆಯಲ್ಲಿಯೇ ಕುಳಿತಿದ್ದನು. ಇಂದು ತಾನು ಗಿರಣಿಗೆ ಹೋಗಬೇಕೋ, ಶಾಲೆಗೆ ಹೋಗಬೇಕೋ ಎಂಬದು ಅವನಿಗೆ ತಿಳಿಯದಾಗಿತ್ತು.

ಚಿಗಪ್ಪನು ದಿನಾಲು ಮನೆಗೆ ಬರುವ ಹೊತ್ತು ಮಿಕ್ಕಿದ ಬಳಿಕ ಹೇಮಾದ್ರಿಯು ಚಿನ್ನವ್ವನನ್ನು ಕುರಿತು—

“ಬಸವ್ವ-ಚಿಗವ್ವ ಇವರೊಡನೆ ಚಿಗಪ್ಪನೂ ಅವರ ತವರೂರಿಗೆ ಹೋದನೋ ಏನೋ ತಿಳಿಯದು. ”

" ಚಿಗವ್ವನು ತವರುಮನೆಗೇ ಹೋದಳೆಂಬ ಬಗ್ಗೆ ಖಾತ್ರಿಯೇನು?

ಆ ಕುದುರೆಯ ಗಾಡಿಯು ನಮ್ಮ ಗಿರಣಿಯ ಬಸಲಿಂಗಪ್ಪನವರದು. ಅದರ ಕೋಚಮನ್ನನ ಗುರುತು ನನಗೆ ಚನ್ನಾಗಿದೆ. ಗಾಡಿಯು ಎಲ್ಲಿಗೆ ಹೋಗುವದೆಂದು ನಾನು ಕೇಳಲು ಆತನು ನಮ್ಮ ಚಿಗವ್ವನ ತವರೂರಿಗೆ ಹೋಗುವದೆಂದು ಹೇಳಿದನು.

"ಹಾಗಾದರೆ ಚಿಗಪ್ಪನೂ ಅಲ್ಲಿಗೇ ಹೋಗಿರಬಹುದೆಂದು ನನಗನಿಸುತ್ತದೆ"

ಇಷ್ಟರಲ್ಲಿ ಬೇರೊಬ್ಬ ಹುಡುಗಿಯು ಅಲ್ಲಿಗೆ ಬಂದಳು. ಆಕೆಯನ್ನು ಕಂಡ ಕೂಡಲೆ ಚಿನ್ನವ್ವನು—ಬಾ, ಪುಟ್ಟವ್ವಾ, ಒಳಗೆ ಬಾ. ಇಂದು ನಮ್ಮ ಮನೆಯಲ್ಲಿ ನಾವೇ ನಾವಾಗಿರುವೆವು, ಎಂದಳು.

ಪುಟ್ಟವ್ವ—ನಿಮ್ಮ ಚಿಗವ್ವಾ ಅವರು ತಮ್ಮ ತವರುಮನೆಗೆ ಹೋಗಿರುವರೆಂಬದನ್ನು ನಾನು ಬಲ್ಲೆನು; ಆದರೆ ನಿಮ್ಮ ಚಿಗಪ್ಪನೆಲ್ಲಿಗೆ ಹೋಗಿರುವನು?"

ಚಿನ್ನ—ಅವರೂ ಅಲ್ಲಿಗೇ ಹೋದಂತೆ ತೋರುತ್ತದೆ.

ಪುಟ್ಟ—ಹೇಗೇನು? ಆದಿರಲಿ-ಇಂದು ನಿಮ್ಮಣ್ಣನು ನಮ್ಮ ಗಿರಣಿಗೆ ಕೆಲಸಕ್ಕೆ ಬರತಕ್ಕವನಿದ್ದನು ಅವನು ಇನ್ನೂ ಏಕೆ ಬರಲಿಲ್ಲೆಂಬದನ್ನು ತಿಳಕೊಂಡು ಬರುವ ಸಲುವಾಗಿ ನಮ್ಮಪ್ಪನು ನನ್ನನ್ನು ಇಲ್ಲಿಗೆ ಕಳಿಸಿಕೊಟ್ಟಿರುತ್ತಾನೆ. ಹೇಮಪ್ಪಾ, ಗಿರಣಿಗೆ ಬರುತ್ತೀಯಲ್ಲವೆ? ನಿಮ್ಮ ಚಿಗಪ್ಪನು ನಿನ್ನೆ ನಮ್ಮಪ್ಪನಿಗೆ ನಿನ್ನ ಬಗ್ಗೆ ಹೇಳಿರುತ್ತಾನೆ. ನಡೆ. ಆದರೆ ಚಿನ್ನವ್ವಾ ನಿಮ್ಮವ್ವನಿಗೆ ಈಗ ಹೇಗೆ ಇದೆ?

"ಒಳಗೆ ನಡೆಯಲ್ಲ" ಎಂದೆಂದು ಚಿನ್ನವ್ವನು ಪುಟ್ಟವ್ವನನ್ನು ಕೋಣೆಗೆ ಕರೆದೊಯ್ದಳು.

ಬಸಲಿಂಗಪ್ಪನವರಿಂದ ಕರೆಯು ಬಂದದ್ದರಿಂದ ಗಿರಣಿಗೆ ಹೋಗೆಂದು ಗಂಗವ್ವನು ಹೇಮಾದ್ರಿಗೆ ಹೇಳಿದಳು. ಪುಟ್ಟವ್ವನು ಎಷ್ಟೋ ಹೊತ್ತು ಗಂಗವ್ವನ ಬಳಿಯಲ್ಲಿ ಕುಳಿತು ಅವಳ ಜಡ್ಡಿನ ವಿಷಯವಾಗಿ ಮಾತಾಡುತ್ತಿದ್ದಳು. ಚಿನ್ನವ್ವನು ಪುಟ್ಟವ್ವನ ಜೀವದ ಗೆಳತಿಯಾಗಿದ್ದಳು. ಆದರೆ ಸಾವಕ್ಕನ ಹೆದರಿಕೆಯ ಸಲುವಾಗಿ ಅವರಿಬ್ಬರು ವಿಶೇಷವಾಗಿ ಒತ್ತಟ್ಟಿಗೆ ಕಲೆತು ಆಟವಾಡುತ್ತಿರಲಿಲ್ಲ.

ಹ್ಯಾಗೂ ಸಾವಕ್ಕನು ಮನೆಯಲ್ಲಿರದ್ದರಿಂದ ಮಧ್ಯಾಹ್ನದಲ್ಲಿ ಪುನಃ ಬರುವೆನೆಂದು ಹೇಳಿ ಪುಟ್ಟವ್ವನು ಹೇಮಾದ್ರಿಯೊಡನೆ ತಮ್ಮ ಮನೆಗೆ ಹೋದಳು. ಹೇಮಾದ್ರಿಯು ಬಂದೊಡನೆ ಅವರ ಮನೆಯಲ್ಲಿ ನಿನ್ನೆ ರಾತ್ರಿ ನಡೆದ ಎಲ್ಲ ಸಂಗತಿಗಳನ್ನು ಅವನಿಂದ ಬಸಲಿಂಗಪ್ಪನವರು ಕೇಳಿಕೊಂಡರು. ಬಸಲಿಂಗಪ್ಪನು ಹೇಮಾದ್ರಿಯ

ತಂದೆಯಾದ ವೀರಪ್ಪನವರ ಜೀವದ ಗೆಳೆಯನಾದುದರಿಂದ ಅವನು ಹೇಮಾದ್ರಿ ಹಾಗು ಚಿನ್ನವ್ವನನ್ನು ಹೊಟ್ಟೆಯ ಮಕ್ಕಳಂತೆ ಪ್ರೀತಿಸುತ್ತಿದ್ದನು. ಆದರೆ ದುಷ್ಟ ಸಾವಕ್ಕನ ಉಪಟಳದಮುಂದೆ ತನ್ನ ಗೆಳೆಯನಹೆಂಡಿರು-ಮಕ್ಕಳ ಪರಾಮರ್ಷವನ್ನು ತೆಗೆದುಕೊಳ್ಳುವದು ಇಷ್ಟು ದಿವಸಗಳವರೆಗೆ ಅವನಿಗೆ ಶಕ್ಯವಿರಲಿಲ್ಲ; ಆದರೆ ಈಗ ತಾನಾಗಿಯೇ ಆ ಪ್ರಸಂಗವೊದಗಿ ಬಂದದ್ದನ್ನು ಕಂಡು ಬಸಲಿಂಗಪ್ಪನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಹೇಮಾದ್ರಿಯು ತನ್ನ ಗಿರಣಿಗೆ ಬರುವ ನೆಂಬದು ಗೊತ್ತಾದಾಗಿನಿಂದ ತಾನು ಆತನ ಕಲ್ಯಾಣವನ್ನು ಯಾವ ಬಗೆಯಿಂದ ಮಾಡಬೇಕೆಂಬ ವಿಚಾರವು ಆತನಲ್ಲಿ ನುರಿಯುತ್ತಿತ್ತು. ಒಮ್ಮೆ ಚಿನ್ನವ್ವನು ಹರಕ ದಟ್ಟಿಯನ್ನುಟ್ಟುಕೊಂಡು ಬಸಲಿಂಗಪ್ಪನ ಮನೆಗೆ ಆಟವಾಡಲಿಕ್ಕೋ ಯಾತಕ್ಕೋ ಹೋಗಿದ್ದಳು. ಅದನ್ನು ಕಂಡು ಅವನು ಆಕೆಗಾಗಿ ಒಂದು ಹೊಸದಟ್ಟಿ-ಕುಪ್ಪಸಗಳನ್ನೂ ಹಾಗು ಹೇಮಾದ್ರಿಗೆಂದು ಒಂದು ಜೋಡು ಹೊಸ ದೋತರ ಗಳನ್ನೂ ಕೊಂಡು ಅವರ ಮನೆಗೆ ಕಳಿಸಿಕೊಟ್ಟಿದ್ದನು; ಆದರೆ ಅವನ್ನು ಕಂಡು ಸಾವಕ್ಕನ ಪಿತ್ತವು ನಡುನೆತ್ತಿಗೇರಿತು. ಆದಕಾರಣ ಅವಳು ಗಂಗವ್ವನನ್ನೂ ಬಸ ಲಿಂಗಪ್ಪನನ್ನೂ ಎಷ್ಟೋ ಬಗೆಯಿಂದ ಆಡಿಕೊಂಡಿದ್ದಳು ಆದ್ದರಿಂದ ಬಸಲಿಂಗ ಪ್ಪನು ಅಂದಿನಿಂದ ಆ ಉಸಾಬರಿಗೆ ಹೋಗುತ್ತಿರಲಿಲ್ಲ.

"ಹಾಗಾದರೆ ನೀನು ಇನ್ನೂ ಕಲಿಯಬೇಕೆನ್ನುತ್ತಿರುವೆಯೋ?" ಹೇಮಾ ದ್ರಿಯು ಸಂಗತಿಯನ್ನೆಲ್ಲ ಕೇಳಿಕೊಂಡ ಬಳಿಕ ಬಸಲಿಂಗಪ್ಪನು ಆತನಿಗೆ ಪ್ರಶ್ನೆಮಾಡಿ ದನು. "ಒಳ್ಳೇದು ಹೇಮಾದ್ರೀ, ಇನ್ನು ನೀನು ಹೋಗೆ ಮಗೂ. ದಿನಾಲು ಮುಂಜಾನೆ ಹತ್ತಕ್ಕೆ ಊಟ ತೀರಿಸಿಕೊಂಡು ಗಿರಣಿಗೆ ಬಾ. ನನಗೊಬ್ಬ ಕಾರಕೂನನ ಅವಶ್ಯಕತೆಯಿತ್ತು. ಇಂದಿನಿಂದ ನೀನೇ ಆ ಕೆಲಸವನ್ನು ಮಾಡು. ನನ್ನಲ್ಲಿ ವಿಶೇಷ ಕೆಲಸವಿಲ್ಲ. ಕೆಲಸ ತೀರಿದ ಕೂಡಲೆ ಅಭ್ಯಾಸ ಮಾಡಲಿಕ್ಕೆ ನಿನಗೆ ಬೇಕಾದಷ್ಟು ಅವಕಾಶ ಸಿಗುವದು. ಪುಸ್ತಕ ಅಥವಾ ಮತ್ತೇನಾದರೂ ಬೇಕಾ ದರೆ ನನಗೆ ತಿಳಿಸು. ನಾನು ಅವುಗಳನ್ನು ನಿನಗೆ ಒದಗಿಸಿ ಕೊಡುತ್ತೇನೆ." ಎಂದು ಹೇಮನಿಗೆ ತಿಳಿಸಿ, ಬಸಲಿಂಗಪ್ಪನು ತನ್ನ ಹೆಂಡತಿಯನ್ನು ಕುರಿತು—ನೀನು ಈಗ ಗಂಗವ್ವನವರ ಬಳಿಗೆ ಹೋಗಿ, ಅವರ ಮೈಯಲ್ಲಿ ಹೇಗಿದೆಯೆಂಬದನ್ನು ವಿಚಾ ರಿಸು. ಶಂಕರಪ್ಪನು ಹೆಂಡತಿಯೊಡನೆ ಮಾವನ ಊರಿಗೆ ಹೋಗಿರಬಹುದೆಂದು ಹೇಮಾದ್ರಿಯ ಮಾತಿನಿಂದ ತಿಳಿದುಬರುತ್ತದೆ. ಆದ್ದರಿಂದ ಅವರ ಮನೆಗೆ ಹೋಗ ಲಿಕ್ಕೆ ನಿನಗೆ ಯಾವ ಸಂಕೋಚವೂ ಇರುವದಿಲ್ಲ. ಈ ವರೆಗೆ ಪಾಪ! ಆ ಬಡವೆಯು

ಬಹು ಕಷ್ಟವನ್ನನುಭವಿಸಿದಳು. ಇನ್ನಾದರೂ ನಮ್ಮಿಂದ ಅವಳಿಗೆ ಏನಾದರೂ ಸಹಾಯವಾದರೆ ನಮ್ಮ ಜನ್ಮದ ಸಾರ್ಥಕವಾದಂತಾದೀತು.

ಎಷ್ಟೋ ದಿವಸಗಳ ತರುವಾಯ ಇಂದು ಗಂಗವ್ವನ ದುಃಖಭಾರವು ಕುಸ ಹಗುರಾಯಿತು. ತನ್ನ ಗೆಳತಿಯಾದ ಶಿವಕ್ಕನು-ಬಸಲಿಂಗಪ್ಪನ ಹೆಂಡತಿಯು.-ತನ್ನೆಡೆಗೆ ಬಂದಮೇಲೆ ಗಂಗವ್ವನು ಅವಳೊಡನೆ ಎಷ್ಟೋ ಸುಖ-ದುಃಖಗಳ ಮಾತನ್ನಾಡಿದಳು. ತನ್ನ ಹಾಗು ತನ್ನ ಮಕ್ಕಳ ಕಷ್ಟಮಯ ಸ್ಥಿತಿಯನ್ನು ವರ್ಣಿಸಿ, ಅವಳು ಎಷ್ಟೋ ಹೊತ್ತಿನವರೆಗೆ ಕಣ್ಣೀರು ಸುರಿಸಿದಳು. ಮನಮುರಿ ಅತ್ತದರಿಂದ ಮತ್ತೆ ಬರುವ ಸಂಕಟಗಳಿಗೆ ಎದುರಾಗುವಷ್ಟು ಸಹನ ಶಕ್ತಿಯು ಅವಳಲ್ಲಿ ಉತ್ಪನ್ನವಾಯಿತು. ಶಿವಕ್ಕನು ಅಲ್ಲಿ ಕುಳಿತಿರುವಾಗ ಎರಡು ಗಂಟೆಯ ಸೂಟಿಯಲ್ಲಿ ಹೇಮಾದ್ರಿಯು ಗಿರಣಿಯಿಂದ ಮನೆಗೆ ಬಂದಿದ್ದನು. ಅವನ ಕಡೆಗೆ ನೋಡಿ ಗಂಗವ್ವನು—"ಶಿವಕ್ಕಾ, ಈ ಹೇಮನನ್ನು ಇಂದು ನಿನ್ನ ಉಡಿಯಲ್ಲಿ ಹಾಕಿರುವೆನು. ಅವನಿಗೆ ವಿದ್ಯೆಯು ಅಭಿರುಚಿಯಿರು............"

ಶಿವಕ್ಕ—"ಗಂಗವ್ವಾ, ಆ ಬಗ್ಗೆ ಇನ್ನು ನೀವು ಚಿಂತೆಮಾಡಬೇಡಿರಿ." ಎಂದು ಹೇಳಿ ಹೊರಟು ಹೋದಳು.

ಹೇಮಾದ್ರಿ—"ಅವ್ವಾ, ಚಿಗಪ್ಪನು ಊರಿಗೆ ಹೋಗಿರುವದಿಲ್ಲೆಂಬದನ್ನು ಚಿಗವ್ವನನ್ನು ಕಳಿಸಿಬಂದ ನಮ್ಮ ಗಿರಣಿಯ ಕುದುರೆಯ ಗಾಡಿಯವನಿಂದ ಕೇಳಿ ಕೊಂಡೆನು."

"ಈ ಸಂಗತಿಯು ಸತ್ಯವೋ? ಹಾಗಾದರೆ ಇಂದು ಮುಂಜಾನೆ ಅವರ ಊಟವೆಲ್ಲಾಯಿತು?" ಎಂದು ಆಶ್ಚರ್ಯಭರದಿಂದ ಗಂಗವ್ವನು ನುಡಿದಳು.

ಶಂಕರಪ್ಪನು ಹೆಂಡತಿಯೊಡನೆ ಊರಿಗೂ ಹೋಗಲಿಲ್ಲ. ದಿನದಂತೆ ಮನೆಗೆ ಮಧ್ಯಾಹ್ನದ ಊಟಕ್ಕೂ ಬರಲಿಲ್ಲ. ಎಂದ ಬಳಿಕ ಆತನು ಹೋಗಿರಬಹುದಾ ದರೂ ಎಲ್ಲಿಗೆ? ಮೊದಲನೇ ದಿವಸ ರಾತ್ರಿ ಹತ್ತುಗಂಟೆಗೆ ಅವನಿಂದ ಯಾವ ಪ್ರಮಾದವುಂಟಾಗಿತ್ತೋ ಆ ಬಗ್ಗೆ ಅವನಿಗೆ ಬಲು ಖೇದವಾಗಿತ್ತು. ತನ್ನ ಹೆಂಡತಿಯು ಮನೆಯಲ್ಲಿರುವವರೆಗೆ ಅಲ್ಲಿ ಇರಲಿಕ್ಕೆ ಅವನಿಗೆ ವಿಶೇಷ ಸಂಕೋಚವೆನಿಸಲಿಲ್ಲ. ಆದರೆ ಆಕೆಯು ಹೊರಬೀಳಹತ್ತಿದ ಕೂಡಲೆ ಅವನ ಮನಸ್ಸಿನಲ್ಲಿ ಪೂರ್ವರಾತ್ರಿಯು ಪ್ರಮಾದದ ಪ್ರಸಂಗವು ಜಾಗ್ರತವಾಗಲು, ಅಣ್ಣನ ಹೆಂಡತಿಗೆ ತನ್ನ ಮೋರೆಯನ್ನು ಕೂಡ ತೋರಿಸುವಷ್ಟು ಧೈರ್ಯವು ಅವನಲ್ಲಿ ಉಳಿಯಲಿಲ್ಲ. ಅಣ್ಣನ ನಿಧನದ ನಂತರ ಅತ್ತಿಗೆಯು ತಮ್ಮ ಮನೆಗೆ ಬಂದಂದಿನಿಂದ ಒಂದು ದಿನವೂ ಅವನು ಅವಳೊಡನೆ ಮಾತಾಡಿರಲಿಲ್ಲ. ಕ್ಷಯರೋಗವಾಗಿ ಆಕೆಯು ಇಷ್ಟು ನಿರ್ವಣ್ಣ

ಳಾಗಿದ್ದರೂ ಅವನು ಪ್ರತ್ಯಕ್ಷವಾಗಿ ಅವಳ ಬೇನೆಯಬಗ್ಗೆ ಅವಳನ್ನು ವಿಚಾರಿಸಿದ್ದಿಲ್ಲ. ಹೆಂಡತಿಯು ತನ್ನ ಅತ್ತಿಗೆಯನ್ನೂ, ಆಕೆಯ ಮಕ್ಕಳನ್ನೂ ಗೋಳಾಡಿಸುತ್ತಿರುವದನ್ನು ಶಂಕರಪ್ಪನು ಸ್ವಂತ ಕಣ್ಣುಗಳಿಂದ ನೋಡುತ್ತಲೂ, ಕಿವಿಯಿಂದ ಕೇಳುತ್ತಲೂ ಇದ್ದನಾದರೂ ಹಾಗೆ ಮಾಡಬೇಡೆಂದು ಹೆಂಡತಿಗೆ ಒಂದು ಮಾತಿನಿಂದ ಕೂಡ ಹೇಳುವಷ್ಟು ಧೈರ್ಯವು ಅವನಿಗಿರಲಿಲ್ಲ. ತನ್ನ ಹೆಂಡತಿಯು ರುಷ್ಟವಾಗಬಾರದೆಂದು ಈತನು ಆಕೆಗೆ ಆ ಕೆಲಸದಲ್ಲಿ ಅಪರೋಕ್ಷ ಬೆಂಬಲವನ್ನೇ ಕೊಡುತ್ತಿದ್ದನು. ಅತ್ತಿಗೆ ಹಾಗು ಅವಳ ಮಕ್ಕಳ ವಿಷಯವಾಗಿ ಇಷ್ಟು ನಿರ್ದಯೆಯಿಂದ ನಡೆದ ಆತನಿಗೆ ತನ್ನ ಹೆಂಡತಿ ಹಾಗು ಮಗಳು ಊರಿಗೆ ಹೋದಕೂಡಲೆ ತಮ್ಮ ಮನೆಯಲ್ಲಿರುವದು ದುಸ್ತರವಾಯಿತು. ಆದ್ದರಿಂದ ಹೆಂಡತಿಯು ಮನೆಯಿಂದ ಹೊರಬಿದ್ದ ಕೂಡಲೆ ಆತನೂ ಹೊರಬಿದ್ದನು; ಆದರೆ ಇಷ್ಟು ಬೇಗನೆ ತಾನು ಎಲ್ಲಿಗೆ ಹೋಗಬೇಕೆಂಬದು ಆತನಿಗೆ ತಿಳಿಯದಾಯಿತು. ಮನಸ್ಸಿನ ಸ್ವೈರಗತಿಯ ಮೇರೆಗೆ ಅವನು ಕೆಲ ಹೊತ್ತಿನವರೆಗೆ ಅತ್ತಿತ್ತ ಸುಮ್ಮನೆ ಅಡ್ಡಾಡಿದನು. ಪೇಟಬಜೆಯ ಅಂಗಡಿಗೆ ಹೋಗುವ ಹೊತ್ತಾದ ಕೂಡಲೆ ಊಟದ ಬಗ್ಗೆ ಏನಾದರೂ ವ್ಯವಸ್ಥೆ ಮಾಡಬೇಕಾಯಿತು. ಇಷ್ಟರಲ್ಲಿ ಆತನಿಗೆ ನಿನ್ನೆ ರಾತ್ರಿ ಭೆಟ್ಟಿಯಾಗಿದ್ದ ಗೆಳೆಯನ ನೆನವಾಯಿತು. ಅದರಿಂದ ಆಗ ಅವನಿಗೆ ಬಹಳ ಸಮಾಧಾನವಾಯಿತು. ತನ್ನ ಭಿಡಸ್ತ ಸ್ವಭಾವವನ್ನು ಕುರಿತು ಆ ಮಿತ್ರನು ನಿನ್ನೆ ದೂಷಿಸಿದ್ದು ಶಂಕರಪ್ಪನ ಲಕ್ಷ್ಯಕ್ಕೆ ಬಂತು. ಆ ದೂಷಣೆಯನ್ನು ಕಳಕೊಳ್ಳಲು ಅನಾಯಾಸವಾಗಿ ಉಂಟಾಗಿರುವ ಪ್ರಸಂಗವನ್ನು ಆತನು ವ್ಯರ್ಥವಾಗಿ ಕಳಕೊಳ್ಳಲಿಲ್ಲ. ಕೂಡಲೆ ನಮ್ಮ ಭೋಳೇ ಶಂಕರಪ್ಪನು ತನ್ನ ಮಿತ್ರನಾದ ರಾಮಪ್ಪನ ಮನೆಗೆ ನಡೆದನು.

ರಾಮಪ್ಪನ ಮನೆಯಲ್ಲಿ ಆತನ ದೂರಿನ ಅಪ್ಪಳೊಬ್ಬಳು ಇರುತ್ತಿದ್ದಳು. ಅವಳು ತನಗೆ ದೊಡ್ಡವ್ವನಾಗಬೇಕೆಂದು ರಾಮಪ್ಪನು ಮುಂದಿಯ ಮುಂದೆ ಹೇಳುತ್ತಿದ್ದನು. ಅವಳೇ ಆತನಿಗೆ ಅಡಿಗೆ ಮಾಡುತ್ತಿದ್ದಳು. ನೆರೆಹೊರೆಯವರು ಆಕೆಯೊಡನೆ ಬಳಿಕೆ ಮಾಡುತ್ತಿರಲಿಲ್ಲ; ಯಾಕಂದರೆ ಅವಳು ಪ್ರಸಿದ್ಧ ನ್ಯಾಯಗಂಟಿಯಾಗಿದ್ದಳು. ರಾಮಪ್ಪನು ಒಬ್ಬ ವಕೀಲನಲ್ಲಿ ಗುಮಾಸ್ತನಾಗಿದ್ದನು. ಆ ನೌಕರಿಯಿಂದ ಅವನಿಗೆ ಚನ್ನಾಗಿ ಪ್ರಾಪ್ತಿಯಿತ್ತು; ಆದರೆ ರಾಮಪ್ಪನಂಥ ಅಷ್ಟಪೈಲು—ಸರ್ವಗುಣಸಂಪನ್ನ—ಮನುಷ್ಯನ ಚರಿತಾರ್ಥವು ಅದೊಂದೇ ಕಸಬಿನಿಂದಾಗುತ್ತಿರಲಿಲ್ಲವಾದ್ದರಿಂದ ಅವನು ಬೇರೆ ಎಷ್ಟೋ ಧಂದೆಗಳನ್ನು ಮಾಡುತ್ತಿದ್ದನು. ಅವನು ಆ ಬೇರೆಬೇರೆ ಕಸಬುಗಳನ್ನು ಸ್ವಂತ ಮಾಡುತ್ತಿರಲಿಲ್ಲ. ಅವುಗಳಲ್ಲಿಯ ದಲಾಲಿಯನ್ನಷ್ಟು ಸಂಪಾದಿಸಿಕೊಳ್ಳುತ್ತಿ

ದ್ದನು. ವಕೀಲರಲ್ಲಿ ಗುಮಾಸ್ತನಿದ್ದದರಿಂದ ಹೇಗೆ ಬಲೆಯೊಡ್ಡಿದರೆ ಬೇಟೆಗಳು ಸಹಜವಾಗಿ ಬೀಳುವವೆಂಬದು ಅವನಿಗೆ ಚನ್ನಾಗಿ ಅವಗತವಾಗಿತ್ತು. ಆದರಿಂದ ಕೈಹಾಕಿದ ಪ್ರತಿಯೊಂದು ಕಸಬಿನಲ್ಲಿ ಹೆಚ್ಚಿಲ್ಲ, ಕಡಿಮೆ ದಲ್ಲಾಲಿಯನ್ನಾದರೂ ಅವನು ಪಡೆಯದೆ ಇರುತ್ತಿರಲಿಲ್ಲ.

ತನ್ನ ಮನಗೆ ಬಂದ ಉದ್ದೇಶವು ತಿಳಿಯುವವರೆಗೆ ರಾಮಪ್ಪನು ಶಂಕರಪ್ಪನೊಡನೆ ಒಳ್ಳೇ ಭರದಾಸ್ತಿನಿಂದ ನಡಕೊಂಡನು; ಆದರೆ ಇಂದು ನಾನು ನಿಮ್ಮಲ್ಲಿಗೆ ಊಟಕ್ಕೆ ಬಂದಿರುವೆನೆಂದು ಶಂಕರಪ್ಪನ ಬಾಯಿಂದ ಶಬ್ದಗಳು ಹೊರಬಿದ್ದ ಕೂಡಲೆ ರಾಮಪ್ಪನ ಮೋರೆಯು ಕಕ್ಕಾವಿಕ್ಕಿಯಾಯಿತು. ಕ್ಷಣಹೊತ್ತು ವಿಚಾರ ಮಾಡಿ, ಆತನು—ಗೆಳೆಯಾ ಶಂಕರಪ್ಪಾ, ಯೋಗಾಯೋಗವಾದರೂ ಹೇಗೆ ಕೂಡಿ ಬರುತ್ತದೆ ನೋಡು. ಮನೆಯಲ್ಲಿ ನಮ್ಮ ದೊಡ್ಡವ್ವನಿಗೆ ಇಂದು ಜಡ್ಡಾಗುವದಕ್ಕೂ ಎಂದಿಲ್ಲದ ನೀನು ಇಂದೇ ನಮ್ಮ ಮನೆಗೆ ಊಟಕ್ಕೆ ಬರಲಿಕ್ಕೂ ಗಂಟೇ ಬಿತ್ತು! ದೊಡ್ಡವ್ವನು ಹಾಸಿಗೆ ಹಿಡಿದು ಬಿದ್ದಿರುವದರಿಂದ ಆಗಲೆ ಹೋಗಿ ನಾನು ಆ ಹಿರೇ ಮಠದವರ ಖಾನಾವಳಿಯಲ್ಲಿ ಉಂಡು ಬಂದೆನು; ಹಾಗು ಈಗ ಆಕೆಗಾಗಿ ಔಷಧತರಲಿಕ್ಕೆ ನಡೆದಿರುವೆನು, ಎಂದಂದು ಶಂಕರಪ್ಪನಿಗೆ ಹೊರಹಾದೀ ಹಚ್ಚಿ ನಡೆದು ಬಿಟ್ಟನು.





# [೫]

...

ಸುಖದ ದಿನಗಳಿರಲಿ, ದುಃಖದ ದಿನಗಳಿರಲಿ ಅವು ಶಾಶ್ವತವಾಗಿ ನಿಲ್ಲುವದಿಲ್ಲ. ಸುಖದ ದಿನಗಳಷ್ಟು ಸಾವಕಾಶವಾಗಿ ಸಾಗಬೇಕೆಂದೂ ದುಃಖದ ದಿವಸಗಳು ಮಾತ್ರ ತೀವ್ರ ಕಳೆಯಬೇಕೆಂದೂ ಮನುಷ್ಯರ ಪ್ರಬಲೇಚ್ಛೆಯಾಗಿದ್ದರೂ ಜಗಚ್ಚಾಲಕನ ಇಚ್ಛೆಯ ವಿರುದ್ಧವಾಗಿ ಯಾವದೂ ನಡೆಯುವದಿಲ್ಲ. ಆದ್ದರಿಂದಲೇ ಈಶ್ವರೀಘಟನಾಚಕ್ರವು ವಿಚಿತ್ರವೆಂದೆನ್ನುವರು. ಹಿಂದಿನ ಪ್ರಕರಣದ ಸಂಗತಿಯು ನಡೆದು ಮೂರು ವರ್ಷಗಳಾದವು. ಈ ಮೂರು ವರ್ಷಗಳ ಅವಧಿಯಲ್ಲಿ ನಮ್ಮ ಕಥಾನಕದಲ್ಲಿಯ ಬೇರೆಬೇರೆ ಪಾತ್ರಗಳು ಹಲವು ಬಗೆಯ ಸುಖ-ದುಃಖಗಳ ಆಸ್ವಾದವನ್ನು ಅನುಭವಿಸಿದವು. ಈಗ ನಾವು ಯಾವ ದಿನದ ಸಂಗತಿಯನ್ನು ಬರೆಯತೊಡಗಿದ್ದೇವೋ ಆ ದಿನವು ಶನಿವಾರವಾಗಿತ್ತು. ಮಧ್ಯಾಹ್ನದ ಸಮಯ. ಶನಿವಾರ ಮಧ್ಯಾಹ್ನ ಸೂಟಿಯಿದ್ದದರಿಂದ ಹೇಮಾದ್ರಿಯ ಗಿರಣಿಯು ಬಂದಾಗಿತ್ತು. ಗಿರಣಿಯೊಳಗಿನ ಕೆಲಸ ತೀರಿದ ಕೂಡಲೆ ಒಂದು ತಾಸು ಬಸಲಿಂಗಪ್ಪನವರ ಮಗಳಾದ ಪುಟ್ಟವ್ವನಿಗೆ ಓದುಬರಹ ಕಲಿಸಿ ನಂತರ ಮನೆಗೆ ಹೋಗುವ ಪರಿಪಾಠವನ್ನು ಹೇಮಾದ್ರಿಯು ಇಟ್ಟುಕೊಂಡಿದ್ದನು. ಆ ಪ್ರಕಾರ ಅವನು ಈಗ ಅವರ ಮನೆಗೆ ಹೋದನು. ನಗೆಮೊಗದಿಂದ ಪುಟ್ಟವ್ವನು ಅವನ ಸ್ವಾಗತಕ್ಕಾಗಿ ನಡುಮನೆಯ ಬಾಗಿಲಲ್ಲಿ ನಿಂತುಕೊಂಡಿದ್ದಳು. ಹೇಮಾದ್ರಿಯು ಬಂದೊಡನೆ ಅವಳು ಒಳ್ಳೇ ಸಂತೋಷದಿಂದ—ಹೇಮಣ್ಣಾ, ಇಂದಿನ ನಮ್ಮ ಸಾಲೆಯ ಪರೀಕ್ಷೆಯಲ್ಲಿ ನಾನು ನಾಲ್ಕನೇ ಇಯತ್ತೆಯಲ್ಲಿ ಪಾಸಾದೆನು. ಈ ಮೊದಲು ಅಂದಂತೆ ನೀನಿನ್ನು ನನಗೆ ಇಂಗ್ಲಿಷವನ್ನು ಕಲಿಸುವೆಯಾ?'' ಎಂದು ಕೇಳಿದಳು. ''ತಂಗೀ, ಹೊರಗೆ ಹೇಮನು ಬಂದಿರುವನೇನು?'' ಎಂದು ಕೇಳಿದ ಬಸಲಿಂಗಪ್ಪನ ಪ್ರಶ್ನೆಗೆ ಪುಟ್ಟವ್ವನು ಹೌದೆಂದು ಹೇಳಲು, ಅವರು ಹೇಮುನನ್ನು ಕರೆದರು.

ಬಸಲಿಂಗಪ್ಪನವರಿಗೆ ಸಂಧಿವಾತದ ವಿಕಾರವಿದ್ದದರಿಂದ ಅವರು ವರ್ಷದಲ್ಲಿ ಒಂದೆರಡು ಸಾರೆ ಹಾಸಿಗೆಹಿಡಿಯಬೇಕಾಗುತ್ತಿತು. ಅವರ ಮೊಣಕಾಲು ಮೊಣಕೈ ಮೊದಲಾದ ಸಂದುಗಳು ಬಾತು ನೋಯಹತ್ತಿದವೆಂದರೆ, ಸಂಧಿವಾತವಾದವರ ಹೊರತು ಅನ್ಯರಿಗೆ ಆ ನೋವಿನ ಅನುಭವವು ಬರುತ್ತಿರಲಿಲ್ಲ. ಈಗೆಂಟು ದಿನಗಳಿಂದ

ಬಸಲಿಂಗಪ್ಪನವರಿಗೆ ಆ ಪ್ರಕಾರ ನೋವು ಆಗುತ್ತಿತ್ತು. ಅಸಹ್ಯ ವೇದನೆಗಳ ಮೂಲಕ ಅವರು ತಮ್ಮ ಗಿರಣಿಯ ಕಡೆಗೆ ಹೋಗುವದು ಒತ್ತಟ್ಟಿಗೇ ಉಳಿಯಿತು, ಆ ಸಂಬಂಧದ ಮಾತು ಕೂಡ ಆಡಲಾರದಷ್ಟು ತ್ರಸ್ತರಾಗಿದ್ದರು. ಅದರಿಂದ ಗಿರಣಿಯ ಕೆಲಸದ ಮೇಲ್ವಿಚಾರಣೆಯನ್ನು ನಮ್ಮ ಹೇಮಾದ್ರಿಯೇ ಮಾಡುತಲಿದ್ದನು. ಅವನು ತಮ್ಮ ಬಳಿಗೆ ಬಂದದ್ದನ್ನು ಕಂಡು ಬಸಲಿಂಗಪ್ಪನವರು—ಏನೋ, ಹೇಮಾದ್ರಿ, ಗಿರಣಿಯೊಳಗಿನ ಕೆಲಸಗಳೆಲ್ಲ ಸರಿಯಾಗಿ ನಡೆದಿರುವವೊ? ಮುಂದಿಯ ಕೆಲಸಗಳನ್ನೆಲ್ಲ ವೇಳೆಗೆ ಸರಿಯಾಗಿಮಾಡಿ ನಮ್ಮ ನಿಯಮಿತ ತನದ ಶೀಲವನ್ನು ಕಾಯ್ದುಕೊಂಡಿರುವೆಯೋ? ಎಂದು ಪ್ರಶ್ನೆ ಮಾಡಿದರು.

ಗಿರಣಿಯ ಕೆಲಸಗಳ ಎಲ್ಲ ಮಾಹಿತಿಯನ್ನು ಹೇಳಿದನಂತರ ಹೇಮಾದ್ರಿಯು ತನ್ನ ಬಕ್ಕಣದೊಳಗಿಂದ ಒಂದು ಕಾಗದ ತೆಗೆದು ಅದನ್ನು ಬಸಲಿಂಗಪ್ಪನ ಕೈಗೆ ಕೊಟ್ಟು—ನಮ್ಮ ಗಿರಣಿಗೆ ಬಂದಿದ್ದ ಒಬ್ಬ ಗೃಹಸ್ಥನು ಸಂಧಿವಾತವಿಕಾರಕ್ಕೆಂದು ಒಂದು ಅನುಭವಜನ್ಯ ಔಷಧವನ್ನು ಹೇಳಿದನು. ನಾನು ಅದನ್ನು ಈ ಕಾಗದದಲ್ಲಿ ಬರಕೊಂಡು ಬಂದಿರುತ್ತೇನೆ, ಎಂದು ಹೇಳಿದನು.

ಎದ್ದು ಕುಳಿತು ಆ ಔಷಧದ ಪಟ್ಟಿಯನ್ನು ಓದಬೇಕೆನ್ನುವಷ್ಟರಲ್ಲಿ ಕಾಲಿಗೆ ಧಕ್ಕೆ ತಾಕಿ ಪ್ರಾಣಾಂತ ಸಂಕಟವು ಒದಗಿದ್ದರಿಂದ ಬಸಲಿಂಗಪ್ಪನು ನರಳುತ್ತ ಮತ್ತೆ ಹಾಸಿಗೆಯ ಮೇಲೆ ಬಿದ್ದುಕೊಂಡನು. ವೇದನೆಯು ತುಸ ಕಡಿಮೆಯಾದ ಬಳಿಕ ಹೇಮಾದ್ರಿಗೇ ಆ ಯಾದಿಯನ್ನು ಓದಹೇಳಿದನು. ಕೂಡಲೆ ಬಸಲಿಂಗಪ್ಪನ ಹೆಂಡತಿಯು ಆ ಎಲ್ಲ ಸಾಮಾನುಗಳನ್ನು ಸಂಗ್ರಹಿಸಿ, [illegible], ಕುದಿಸಿ, ಆ ಲೇಪವನ್ನು ಪತಿಯ ಸಂದುಸಂದುಗಳಿಗೆ ಹಚ್ಚಿದಳು; ಹಾಗು ಆ ಲೇಪವು ಒಣಗುವವರೆಗೆ ನಿಗಸಿಗಿಯಾದ ಕೆಂಡದಿಂದ ಕಾಸಿದಳು. ಲೇಪವನ್ನು ಹಚ್ಚಿದ ಒಂದು ತಾಸಿಗೇ ಬಸಲಿಂಗಪ್ಪನಿಗೆ ಎಷ್ಟೋ ಗುಣವೆನಿಸಿತು. ಆ ಲೇಪವನ್ನು ಆ ದಿನ ಮತ್ತೆರಡು ಸಾರೆ ಹಚ್ಚಲು ಸಂಜೆಯ ಒಳಗಾಗಿ ವಾತವು ಕಡಿಮೆಯಾಗಿ ಅವನಿಗೆ ಅಡ್ಡಾಡಲಿಕ್ಕೆ ಬರಹತ್ತಿತು. ಮುಂದೆ ಎರಡು ಮೂರು ದಿನಗಳ ವರೆಗೆ ಆ ಔಷಧವನ್ನು ಸಾಧಿಸಲು ಆತನಿಗಾದ ಸಂಧಿವಾತದ ವಿಕಾರವು ನಾಮಶೇಷವಾಯಿತು!

ಶಿವಕ್ಕನು ಹೇಮಾದ್ರಿಯನ್ನು ಅಂದು ಮನೆಗೆ ಊಟಕ್ಕೆ ಬಿಡಲೇ ಇಲ್ಲ. ತಮ್ಮಲ್ಲಿಯೇ ಉಣ್ಣೆಂದು ಅವನಿಗೆ ಹೇಳಿದಳಲ್ಲದೆ, ಇಂದು ಹೇಮಾದ್ರಿಯು ಇಲ್ಲಿಯೇ ಉಣ್ಣುವನೆಂದು ಆತನ ತಾಯಿಗೂ, ತಂಗಿಗೂ ತಿಳಿಸಿ ಬರುವದಕ್ಕಾಗಿ ಪುಟ್ಟಪ್ಪನನ್ನು ಕಳಿಸಿದಳು. ಹೇಮಾದ್ರಿಯು ಒಲ್ಲೆ-ಒಲ್ಲೆನೆನ್ನುತ್ತ ಅಂದು ಅವ

ರಲ್ಲಿ ಊಟಮಾಡಿದನು. ಊಟಕ್ಕೆ ಕುಳಿತಾಗ ಶಿವಕ್ಕನೂ, ಬಸಲಿಂಗಪ್ಪನೂ ಪುಟ್ಟವ್ವನಿಗೆ ಇಂಗ್ಲಿಷ ಕಲಿಸುವ ವಿಷಯವಾಗಿ ಹೇಳಿದರು; ಹೇಮನು ಗೋಣು ಹಾಕಿ, ಅವರು ಹೇಳಿದ್ದಕ್ಕೆ ಸಮ್ಮತಿಯನ್ನಿತ್ತನು.

ಇಷ್ಟು ಆದರದ ಸವಿಯೂಟವನ್ನು ತಂದೆ ಸತ್ತಾಗಿನಿಂದ ಹೇಮನು ಉಂಡಿದ್ದಿಲ್ಲ. ಅದರಿಂದ ಇಂದು ಬಸಲಿಂಗಪ್ಪನಲ್ಲಿ ಊಟಕ್ಕೆ ಕುಳಿತಾಗಿನಿಂದ ಅವನಿಗೆ ಅವನ ತಂದೆಯ ಕಾಲದ ಸುಖದ ದಿನಗಳ ನೆನಪಾಗಿ ಆಗಾಗ್ಗೆ ಗಂಠವು ಬಿಗಿದು ಬರುತ್ತಿತ್ತು. ಅವನ ಈ ಸ್ಥಿತಿಯು ಬಸಲಿಂಗಪ್ಪನಿಗೆ ಹೊಳೆಯದಿದ್ದರೂ ಪ್ರೇಮಲ ಸ್ವಭಾವದ ಶಿವಕ್ಕನಿಗೆ ಒಮ್ಮೆಲೆ ಹೊಳೆಯಿತು. ಆಗ ಅವಳು ತಮ್ಮಾ, ಹೀಗೇಕೆ ಮಾಡುವೆ? ಎಂದಂದಕೂಡಲೆ ದುಃಖವು ಆವರಿಸದ ಹೇಮನು ಬಿಕ್ಕಿ-ಬಿಕ್ಕಿ ಅಳಲಾರಂಭಿಸಿದನು. ಇದನ್ನು ಕಂಡು ಸಮೀಪದಲ್ಲಿ ನಿಂತಿದ್ದ ಪುಟ್ಟವ್ವನ ಕಣ್ಣೊಳಗೂ ನೀರು ಸುರಿದವು.

      

ಇತ್ತೀಚೆಗೆ ಗಂಗಮ್ಮನಿಗೆ ಹಾಸಿಗೆಯು ಮೇಲಿಂದ ಎದ್ದು ಕೂಡ್ರಲಿಕ್ಕೆ ಸಹ ಬರುತ್ತಿರಲಿಲ್ಲ. ಅದರಿಂದ ಎಲ್ಲ ಮನೆಗೆಲಸಗಳನ್ನು ಚಿನ್ನವ್ವನೇ ಮಾಡುತ್ತಿದ್ದಳು. ಈ ಮಧ್ಯದಲ್ಲಿ ಶಂಕರಪ್ಪನ ಗೆಳೆಯನಾದ ರಾಮಪ್ಪನು ತನ್ನ ದೊಡ್ಡವ್ವನೊಡನೆ ಅವರ ಮನೆಯನ್ನು ಪ್ರವೇಶಿಸಿದ್ದನು. ಮೊದಮೊದಲು ರಾಮಪ್ಪನ ಆ ದೊಡ್ಡವ್ವ ಹಾಗು ಸಾವಕ್ಕ ಇವರಲ್ಲಿ ಒಳ್ಳೇ ಸಖ್ಯವುಂಟಾಗಿತ್ತು. ಆದರೆ ಭರತಿಯ ಕಾಲದ ಸಮುದ್ರದ ತೆರೆಗಳು ದಂಡೆಯ ಮೇಲಿನ ಬಂಡೆಗಲ್ಲಿಗೆ ಅಪ್ಪಳಿಸದೆ ಬಿಡುವವೇ? ಕೆಲ ದಿವಸಗಳಲ್ಲಿಯೇ ಅವರೀರ್ವರೂ ತಮ್ಮ ತಮ್ಮ ಸ್ವಭಾವಧರ್ಮವನ್ನು ಪರಸ್ಪರರಿಗೆ ಚನ್ನಾಗಿ ತಿಳಿಸಿಕೊಟ್ಟರು. ಒಂದುದಿನ ಅವರೀರ್ವರಲ್ಲಿ ದೊಡ್ಡ ಯುದ್ಧವಾಗಿ ಕಡೆಗೆ ಸಾವಕ್ಕನು ಆ ರಾಮಪ್ಪನ ದೊಡ್ಡವ್ವಳೆಂಬವವಳಿಗೆ ಕಸಬರಿಗೆಯಿಂದ ಹೊಡೆದು ತಮ್ಮ ಮನೆಯಿಂದ ಹೊರಗೆ ಹಾಕಿದಳು! ಹೀಗೆ ಮಹಾ-ಯುದ್ಧದಲ್ಲಿ ಪರಾಜಯಹೊಂದಿ ಆ ಸಾಡೇಸಾತಿಯು ಮನೆ ಬಿಟ್ಟು ಹೋದಂದಿನಿಂದ ಗಂಗಮ್ಮ, ಚಿನ್ನಮ್ಮ ಹಾಗು ಹೇಮಾದ್ರಿಯರಿಗೆ ಸಂತೋಷವಾಯಿತು. ಅದರಲ್ಲಿಯೂ ಚಿನ್ನವ್ವನಿಗೆ ವಿಶೇಷ ಆನಂದವಾಯಿತು. ಯಾಕೆಂದರೆ ಸಾವಕ್ಕ ಹಾಗು ಬಸವ್ವ ಇವರು ಭೂ ಬಿಟ್ಟಾಗೆಲ್ಲ ಆ ರಾಮಪ್ಪನ ದೊಡ್ಡವ್ವನೆಂಬುವವಳು ಚಿನ್ನವ್ವನಿಗೆ ಬಹಳ ಕಾಡಿಸುತ್ತಿದ್ದಳು.

ತನ್ನ ದೊಡ್ಡವ್ವನೇ ಈ ಪ್ರಕಾರ ಪೂಜೆ ಮಾಡಿಸಿಕೊಂಡು ಹೊರಬಿದ್ದಬಳಿಕ ರಾಮಪ್ಪನು ಅಲ್ಲಿರುವ ಬಗೆ ಹೇಗೆ? ಆತನೂ ಅಂದೇ ಹೊರಬಿದ್ದನು. ಶಂಕರಪ್ಪನ ಹೆಂಡತಿಯು ತವರುಮನೆಯಿಂದ ಐನೂರು ರೂಪಾಯಿ ತಂದಳೆಂದು ತಿಳಿದಕೂಡಲೆ ರಾಮಪ್ಪನು ಶಂಕರಪ್ಪನ ಜೀವಶ್ಚ-ಕಂಠಶ್ಚ ಮಿತ್ರನಾಗಿ ಅವನಲ್ಲಿಯೇ ಬಂದು ಇರ ಹತ್ತಿದ್ದನು; ಆದರೆ ಆ ಇಬ್ಬರು ನಿಷ್ಣಾತ ಶಿರೆಕುಡುಕರಿಗೆ ಆ ಅರ್ಧಸಹಸ್ರದ ನಿಧಿಯು ಎಷ್ಟು ದಿನಗಳ ವರೆಗೆ ಪೂರೈಸಬೇಕು? ತಿಂಗಳೊಪ್ಪತ್ತಿನಲ್ಲಿಯೇ ಅವರು ಅದನ್ನು ನುಂಗಿ-ನೀರು ಹಿಡಿದರು. ಶಂಕರಪ್ಪನ ಕೈಯೊಳಗಿನ ಗಂಟು ತೀರಿದ ಬಳಿಕ ರಾಮಪ್ಪನು ಅವನೊಡನೆ ಇರುವದೇತಕ್ಕೆ? ಅವನು ತಾನಾಗಿಯೇ ಇವರ ಮನೆಯಿಂದ ಹೊರಡುವ ಬೇತಿನಲ್ಲಿದ್ದನು; ಆದರೆ ಮನೆಯೊಳಗಾದ ಯುದ್ಧದಲ್ಲಿ ತನ್ನ ದೊಡ್ಡವ್ವನೆಂಬುವವಳು ಶರಣಾಗತಳಾದ ನೆವಸಿಕ್ಕಕೂಡಲೆ ಆತನು ಸಹಜವಾಗಿಯೇ ಅಲ್ಲಿಂದ ಕಾಲ್ದೆಗೆದನು.

ರಾಮಪ್ಪನು ಮನೆ ಬಿಟ್ಟು ಹೋದರೂ ಶಂಕರಪ್ಪನು ಅವನನ್ನು ಬಿಡದಾದನು. ಆಗ ಅವನು ಇವನಿಗೆ ದುಡ್ಡು ಗಳಿಸುವದೊಂದು ಹೊಸ ಯುಕ್ತಿಯನ್ನು ತೋರಿಸಿಕೊಟ್ಟನು. ಅದೇನೆಂದರೆ—ಇಂದು ತನಗೆ ಐದು ರೂಪಾಯಿಗಳು ಬೇಕಾಗಿದ್ದರೆ, ಸಾವುಕಾರನು ಕೇಳುವಷ್ಟು ಅಂದರೆ ಹತ್ತು-ಹದಿನೈದು-ಇಪ್ಪತ್ತೈದು ರೂಪಾಯಿಗಳ ಕಾಗದ ಬರೆದು ಕೊಡುವದು. ಈ ಯುಕ್ತಿಯಿಂದ ಶಂಕರಪ್ಪ ಹಾಗು ರಾಮಪ್ಪ ಇವರ ಚೈನಿಯು ಮತ್ತೆ ಕೆಲ ದಿನಗಳವರೆಗೆ ಸಾಗಿತು. ಈ ಅವಧಿಯಲ್ಲಿ ಶಂಕರಪ್ಪನು ತನ್ನ ಮಾವನಿಂದ ಹೊಸಮನೆಯು ಖರೀದಿಗೆಂದು ತಂದ ಐನೂರು ರೂಪಾಯಿಗಳನ್ನು ಕಳಕೊಂಡನಲ್ಲದೆ, ಸರಾಸರಿ ಎರಡು ಸಾವಿರ ರೂಪಾಯಿಗಳ ಸಾಲಗಾರನಾದನು. ಈ ಪ್ರಕಾರದ ದುರ್ವ್ಯಸನದಲ್ಲಿಯೇ ಶಂಕರಪ್ಪನ ಕೈಯಲ್ಲಿದ್ದ ಎಲ್ಲ ಹಣವು ವಿನಿಯೋಗವಾಗಿ ಹೋದದ್ದರಿಂದ, ಖರೀದಿ ಹಿಡಿಯಬೇಕೆಂದಿದ್ದ ಸಾಲೀ ಶರಣಪ್ಪನವರ ಮನೆಗೆ ದೂರದಿಂದಲೇ ಶರಣು-ಹೊಡೆದು ಬಿಡಬೇಕಾಯಿತು!

ವಾಚಕಮಹಾಶಯರೇ, ನೋಡಿದಿರಾ, ನಮ್ಮ ಭೋಳೇ ಸ್ವಭಾವದ ಶಂಕರಪ್ಪನ ಪರಮಮಿತ್ರನ ಪ್ರತಾಪವನ್ನು! ರಾಮಪ್ಪನಂಥ ನೀಚರು ಜೀವದ ಗೆಳೆಯರ ವೇಷವನ್ನು ಹಾಕಿಕೊಂಡು ನಮ್ಮ ಸಮಾಜದಲ್ಲಿಯ ಶಂಕರಪ್ಪನಂಥ ಭೋಳೇಸ್ವಭಾವದ ಮೋಷಪಾತ್ರಗಳ ಮನೆಮಾರುಗಳನ್ನು ಹೇಗೆ ಗೊತ್ತಿಗೆ ಹಚ್ಚುವರು ನೋಡಿರಿ. ಈ ಮನ್ವಂತರದಲ್ಲಿ ಜೀವನಕಲಹದ ಪೇಚಿನಲ್ಲಿ ಸಿಕ್ಕಂಥ ಪ್ರತಿಯೊಬ್ಬ ಮನುಷ್ಯನು

ಇಂಥ ಚಂಡಾಲರ ದೃಷ್ಟಿಯು ತನ್ನ ಧನ, ಶರೀರ, ಕುಟುಂಬದ ಜನರು, ಲೌಕಿಕ ಮಾನ-ಮರ್ಯಾದೆ ಇವುಗಳ ಮೇಲೆ ಬೀಳದ ಹಾಗೆ ದಕ್ಷತೆವಹಿಸಬೇಕು. ಅಂದರೇ ಆತನು ಈ ಪ್ರಪಂಚದಲ್ಲಿ ಕೆಲಕಾಲ ಬಾಳಿ ನಿಜವಾದ ಸಂಸಾರಿಯಾಗಬಹುದು. ನಮ್ಮ ಸಮಾಜವು ದಿನೇದಿನೇ ಹೆಚ್ಚು ಅಧಃಪತನಕ್ಕೆ ಅಣಿಯಾಗಿದೆ. ಕೊಲ್ಲದ ಅನುಕರಣಕ್ಕೆ ಬಿದ್ದ ನಮ್ಮ ಸಮಾಜದೊಳಗಿನ ತರುಣರಿಗೆ ಈ ದುಷ್ಟರ ಸೊಗಡು ಬೇಗನೆ ಅಂಟುವದು ಖಂಡಿತವು. ಯಾವನಾದರೊಬ್ಬನಲ್ಲಿ ನಾಲ್ಕು ದುಡ್ಡು ಇವೆಯೆಂದು ತಿಳಿದ ಕೂಡಲೆ ಹೆಣದ ವಾಸನೆಯನ್ನು ತಿಳಿದು ಬರುವ ರಣಹದ್ದುಗಳಂತೆ ಆ ದುರ್ಮಿತ್ರರು ಅವರ ಸುತ್ತುಮುತ್ತು ಕಲೆತರೆಂದೇ ತಿಳಿಯಬೇಕು; ಹಾಗು ಅವರು ಈ ಕಥಾನಕದೊಳಗಿನ ನಮ್ಮ ಶಂಕರಪ್ಪನಂತೆ ಅವನನ್ನು ಗತಿಗಾಣಿಸದೆ ಬಿಡರು. ಇರಲಿ.

* * * * *

ಶಿವಕ್ಕನು ಹೇಮಾದ್ರಿಯು ಕಣ್ಣೊಳಗೆ ನೀರು ತಂದದ್ದನ್ನು ನೋಡಿ ಅವನನ್ನು ಹಲವು ಬಗೆಯಿಂದ ಸಮಾಧಾನ ಪಡಿಸಿದಳು. ಬಳಿಕ ಅವಳು—ತಮ್ಮಾ, ನೀನು ಈಗ ಹ್ಯಾಗೂ ದುಡಿಯುಹತ್ತಿರುವೆ ನಿಮ್ಮ ಮಾವರ ಸಂಸಾರಕ್ಕೆ ನಿನ್ನ ಇಷ್ಟು ಸ್ವಲ್ಪ ಸಂಬಳವು ಸಾಲುವದಿಲ್ಲೆಂಬದು ನಿಜ; ನೀನು ನಿಮ್ಮ ತಾಯಿಯನ್ನು ಕೇಳಿ ಬೇರೆ ಮನೆಮಾಡಿಕೊಂಡಿರುವದಾದರೆ ಇಂದಿನಿಂದಲೇ ನಿನಗೆ ಸಾಕಷ್ಟು ಸಂಬಳ ಕೊಡಲು ಅವರಿಗೆ ತಿಳಿಸುತ್ತೇನೆ.

ಹೇಮು—ಶಿವಕ್ಕನವರೇ, ನಮ್ಮ ತಾಯಿಯು ಆ ಮಾತಿಗೆ ಎಂದೂ ಒಪ್ಪ ತಕ್ಕವಳಲ್ಲ. ಅದಕ್ಕೆ ಅವಳು ಒಪ್ಪುತ್ತಿದ್ದರೆ ಆಕೆಗೂ ಚಿನ್ನಮ್ಮನಿಗೂ ಆಗುತ್ತಿರುವ ಅನನ್ವಿತ ಅವಹೇಲನೆಗಳನ್ನು ನಾನು ಎಂದೋ ತಪ್ಪಿಸುತ್ತಿದ್ದೆನು.

ಶಿವಕ್ಕ—ತಮ್ಮಾ, ನಿನ್ನ ತಾಯಿಯು ಬಲು ಸುಜನಳು. ಮಗನೊಡನೆ ಬೇರೆಯಿದ್ದರೆ ತಮ್ಮ ಮನೆತನದ ಗೌರವಕ್ಕೆ ಎಲ್ಲಿ ಕುಂದು ಬರುತ್ತದೋ ಎಂದು ಅವಳು ಅಂಜಿ ನಡೆಯುವಳು; ಮತ್ತು ಆ ಅಂಜಿಕೆಯ ಸಲುವಾಗಿಯೇ ಅವಳು ಇಷ್ಟು ಆತ್ಮಕ್ಲೇಶವನ್ನು ಸಹಿಸುತ್ತಿರುವಳು.

ಶಿವಕ್ಕನು ಅಂದಂತೆ ಗಂಗಮ್ಮನು ಲೌಕಿಕ-ಗೌರವಗಳೆಂಬ ಸಮಾಜದೊಳಗಿನ ಬೀಸೀಕಲ್ಲಿನ ಹೊಳಕೆಗಳಲ್ಲಿ ಸಿಕ್ಕು ನುಗ್ಗಾಗುತ್ತಿರುವ ಹೆಣ್ಣುಮಗಳಾಗಿದ್ದಳು. ಈಗಿನ ಮನ್ವಂತರದಂತೆ ಆಕೆಯ ಆ ಭಾವನೆಗೆ ತುಚ್ಛಭಾವನೆಯೆಂದು ಜನರು

ಅಂದರೂ ಗಂಗಮ್ಮನು ನಡೆಯುತ್ತಿದ್ದ ಆಚರಣೆಯೇ ನಮ್ಮ ಭಾರತವಾಸಿಗಳ ಪ್ರತಿಯೊಂದು ಜಾತಿಯವರಲ್ಲಿ ಬಹು ಪ್ರಾಚೀನಕಾಲದಿಂದ ನಡೆದು ಬಂದ ಆಚರಣೆಯಾಗಿರುವದೆಂಬದರಲ್ಲಿ ಸಂಶಯವಿಲ್ಲ. ನಮ್ಮ ದೇಶದಲ್ಲಿಯ ಮನೆತನಸ್ಥ ಹೆಣ್ಣುಮಕ್ಕಳಲ್ಲಿರುವ ಮಾನಮರ್ಯಾದೆಗಳೂ, ಪತಿನಿಧನಾನಂತರದ ಅವರ ಆಚರಣೆಯೂ, ಗಂಡನ ಮನೆತನದ ವಿಷಯಕವಾದ ಅವರ ಸ್ವಾಭಿಮಾನವೂ, ವೈಧವ್ಯದೆಸೆಯಲ್ಲಿ ಎಷ್ಟು ಸಂಕಟಗಳು ಪ್ರಾಪ್ತವಾದರೂ ಅವುಗಳೊಳಗಿಂದ ಪಾರಾಗುವ ಅವರ ಧೈರ್ಯ, ಸಹನಶೀಲತೆಗಳೂ ಸುಧಾರಣೆಯ ಶಿಖರಕ್ಕೆ ಮುಟ್ಟಿದವರೆಂದು ಮೆರೆಯುವ ಆಂಗ್ಲ ಜನಾಂಗದವರನ್ನು ಕೂಡ ದಂಗು ಬಡಿಸುತ್ತಿರುವವು. ಇರಲಿ.

ಹೇಮಾದ್ರಿಗೆ ಈಗ ತಿಂಗಳಿಗೆ ಇಪ್ಪತ್ತೈದು ರೂಪಾಯಿ ಸಂಬಳವು ದೊರೆಯುತ್ತಿತ್ತು. ಅದರ ಹೊರತು ಖಾಸಗೀರೀತಿಯಿಂದ ಅವನು ಮ್ಯಾಟ್ರಿಕ್‌ದವರೆಗೆ ಅಭ್ಯಾಸ ಮಾಡಿದ್ದು ಈ ಸಾರೆ ಪರೀಕ್ಷೆಗೆ ಕೂಡುವ ತಯಾರಿಯಲ್ಲಿದ್ದನು. ಅದರಿಂದ ಅವನು ಈಗ ಸ್ವತಂತ್ರ ಮನೆ ಮಾಡಿಕೊಂಡಿದ್ದರೆ ಗಂಗಮ್ಮನ ಶುಶ್ರೂಷೆಗೆ ಅನುಕೂಲವಾಗಿ ಚಿನ್ನವ್ವನ ಕಷ್ಟವೂ ತಪ್ಪುವಂತಿತ್ತು; ಆದರೆ ತನ್ನ ವೈದ್ಯದನನಿಂದ ಬೇರೆಯಾಗಿರುವ ವಿಚಾರವು ಗಂಗಮ್ಮನಿಗೆ ಎಂದೂ ರುಚಿಸುತ್ತಿರಲಿಲ್ಲ. ಕೇವಲ ನಿರಾಶ್ರಿತ ಸ್ಥಿತಿಯಲ್ಲಿ ತನ್ನ ಇಬ್ಬರು ಮಕ್ಕಳೊಡನೆ ತನಗೆ ಆಶ್ರಯಕೊಟ್ಟ ವೈದ್ಯನ ಉಪಕಾರವನ್ನು ಮರೆತು, ಮಗನಿಗೆ ನಾಲ್ಕು ದುಡ್ಡು ಸಂಪಾದನೆಯಾಗಹತ್ತಿದ ಕೂಡಲೆ ಬೇರೆಯಾಗುವ ಕಲ್ಪನೆಯು ಆಕೆಗೆ ದುಸ್ಸಹವಾಯಿತು. ಕೈಯಲ್ಲಿ ದುಡ್ಡಿಲ್ಲದ ಮೂಲಕ ಶಂಕರಪ್ಪನ ಸಂಸಾರಶಕಟವು ನಡನಡುವೆ ಮುಗ್ಗರಿಸುತ್ತಿರುವ ಈ ಕಾಲಕ್ಕೆ ಹೇಮಾದ್ರಿಯ ಪಗಾರದಿಂದ ಅವನಿಗೆ ಎಷ್ಟೋ ಸಹಾಯವಾಗುತ್ತಿತ್ತು. ಆದುದರಿಂದ ಈಗ ತಾವು ವಿಭಕ್ತರಾಗಿರಹತ್ತಿದರೆ ವೈದ್ಯನು ತಮಗೆ ಕೃತಘ್ನನೆಂದಾನು. ಅಲ್ಲದೆ ಕುಸ ದಿನಗಳಲ್ಲಿಯೇ ಚಿನ್ನವ್ವನ ಮದುವೆಯಾಗಬೇಕಾಗಿದೆ. ನಮ್ಮ ಮನೆತನದಲ್ಲಿ ಈಗ ಅವರೇ ಯಜಮಾನರಾದುದರಿಂದ ಆ ಕೆಲಸವಾದರೂ ಅವರಿಂದಲೇ ಆಗಬೇಕು. ಆದ್ದರಿಂದ ಮನೆಯೊಳಗಿನ ಕ್ಷುಲ್ಲಕ ಕಷ್ಟಗಳಿಗೆ ಅಂಜಿ ತನ್ನ ಮಕ್ಕಳೊಡನೆ ಬೇರೆಯಾಗಿರುವದೆಂದರೆ ತನ್ನ ಕುಲಕ್ಕೆ ಕಲಂಕಹಚ್ಚಿದಂತೆಯೇ ಸರಿಯೆಂದು ಆ ಹಳೇ ಪದ್ಧತಿಯ ಹೆಣ್ಣುಮಗಳ ನಿಶ್ಚಿತಮತವಾಗಿತ್ತು. ಅಂತೇ ಹೇಮಾದ್ರಿಯು ಅಂದು ಸಂಜೆಯ ಮುಂದೆ ಮನೆಗೆ ಬಂದು ಶಿವಕ್ಕ-ಬಸಲಿಂಗಪ್ಪನವರು ಹೇಳಿದ ಬೇರೆಯಾಗಿರುವ ಸಂಗತಿಯನ್ನು ತನ್ನ ತಾಯಿಗೆ ತಿಳಿಸಲು, ಅವಳು ಆಗ ತನ್ನ ಮಗನಿಗೆ:—

"ತವಮ್ಮಾ. ನಿಮ್ಮ ಚಿಗವ್ವನು ಬಾಯಿಗೆ ಬಂದಹಾಗೆ ಅನ್ನುವಳೆಂದು ನಾವು ಅವರಿಂದ ಬೇರೆಯಾಗಿರುವದು ಸರಿಯಲ್ಲ. ಎಲಾ, ಚಿಗವ್ವನು ಬೈಯ್ಯುವಳು, ಚಿಗವ್ವನು ಅನ್ನುವಳು, ಎಂದು ನೀನು ಹಗಲೆಲ್ಲ ಅನ್ನುವಿಯಲ್ಲ! ಅದರ ಅರ್ಥ ವೇನು? ಈಗ ನಾಲ್ಕು ದುಡ್ಡು ದೊರೆಯಹತ್ತಿದವೆಂದು ನಿನಗೆ ನಿಮ್ಮ ಚಿಗವ್ವನ ಬೈಗಳು ಕಾಣಹತ್ತಿದವೇನು? ಆದರೆ ಗಿರಣಿಯ ಕೆಲಸಕ್ಕೆ ಹೋಗುವ ಮೊದಲು, ಇದಕ್ಕೂ ಎಷ್ಟೋ ಪಾಲು ಹೆಚ್ಚು ಅವಳ ಬೈಗಳನ್ನು ನೀನು ಸುಮ್ಮನೆ ಸಹನ ಮಾಡುತ್ತಿದ್ದೆಯಲ್ಲ! ಹುಚ್ಚಿ, ತಮ್ಮ ಮನೆಯೊಳಗಿನ ಹಿರಿಯರ ನಾಲ್ಕು ಬೈಗ ಳನ್ನು ಯಾವನು ಸಹನಮಾಡಲಾರನೋ, ಆತನು ಮುಂದಿಯ ನೌಕರಿ, ಚಾಕರಿಗಳ ನ್ನೇನು ಮಾಡಬಲ್ಲನು? ಚಿಗವ್ವನು ಸಿಟ್ಟುಮಾಡಿದರೆ ಏನಾಯಿತು? ನಿಮ್ಮ ಚಿಗ ಪ್ಪನ ಆಸ್ತಿಪಸ್ತಿ ಕೂಡ ನಿನ್ನನ್ನು ಹಳಿಯುವದಿಲ್ಲವಷ್ಟೇ? ನಾವು ಅವರ ಮೋರೆಯ ಕಡೆಗೆ ನೋಡಿ ಇರಬೇಕು. ಚಿಗವ್ವಾ ಇವರು ಹಗಲೆಲ್ಲ ಬೈಯ್ಯು ತ್ತಿರುವದರಿಂದ ಅವರ ಸ್ವಭಾವವೇ ಅಂಥದೆಂದು ತಿಳಿದು ಸುಮ್ಮನಿದ್ದರಾಯಿತು. ನಮ್ಮ ಕೈಗೆ ಒಂದು ಹುರುಕಿನ ಗುಳ್ಳೆಯಾದ ಮಾತ್ರದಿಂದ ಆ ಇಡೀ ಕೈಯನ್ನೇ ಕತ್ತರಿಸಿ ಚೆಲ್ಲಬೇಕೋ?"

ಈ ಪ್ರಕಾರವಾಗಿ ಉಪದೇಶಿಸಿ, ಬೇರೆಯಾಗಿರಬೇಕೆಂಬ ಹೇಮಾದ್ರಿಯ ಮನಸ್ಸಿನ ಸಂಕಲ್ಪವನ್ನು ಅವಳು ಕಳೆಯುತ್ತಿದ್ದಳು. ಇದರಂತೆಯೇ ಚಿಗವ್ವನ ಅಸಹ್ಯ ಬೈಗಳನ್ನು ಸಹಿಸಲಾರದ ಚನ್ನವ್ವನು ಎಂದಾದರೂ ಬಂದು ತನ್ನ ಬಳಿ ಯಲ್ಲಿ ಅತ್ತು ಮರುಗಹತ್ತಿದರೆ, ಗಂಗವ್ವನು ಅವಳನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿ ಕೊಂಡು—"ತಂಗೀ, ಚಿನ್ನವ್ವಾ, ಸುಮ್ಮನೆ ನೀನೇಕೆ ಅಳುತ್ತೀ? ನಮ್ಮ ಸ್ತ್ರೀ ಯರ ಜನ್ಮವು ಇಂಥ ಸಂಸಾರದ ಶಕಟವನ್ನು ಎಳೆದೊಯ್ಯುವದಕ್ಕಾಗಿಯೇ ಇರು ತ್ತದೆ. ಎಲ್ಲ ಹೆಣ್ಣು ಮಕ್ಕಳಿಗೂ ಧನವಂತ ಅತ್ತೆಯ ಮನೆಯು ಎಲ್ಲಿ ಸಿಗಬೇಕು? ಬಡವರ ಮನೆಗೆ ಬಿದ್ದ ಹೆಂಗಳೆಯು ತಾನೊಬ್ಬಳೇ ಹತ್ತುಮಂದಿಯುಳ್ಳ ತನ್ನ ಸಂಸಾರದ ಕೆಲಸಗಳನ್ನು ನೀಗಿಸಿಕೊಳ್ಳಬೇಕಾಗುವದೆಂಬದನ್ನು ನೀನು ನಮ್ಮ ನೆರೆ ಮನೆಯ [illegible]ನ್ನು ನೋಡಿ ತಿಳಿದಿರಬಹುದು. ಹೀಗೆ ನಾನು ಹಾಸಿಗೆ ಹಿಡಿದು ಬಿದ್ದುಕೊಂಡಿರುವದರಿಂದಲೇ ಈ ಚಿಕ್ಕ ವಯಸ್ಸಿನಲ್ಲಿ ನಿನಗೆ ಅನಿವಾರ್ಯವೆಂದು ಈ ಮನೆಯ ಎಲ್ಲ ಕೆಲಸಗಳನ್ನು ಮಾಡಬೇಕಾಗಿದೆ; ಆದರೆ ತಂಗೀ, ನಾನಾದರೂ ಏನು ಮಾಡಲಿ? ಇದಕ್ಕೆ ಬೇರೆ ಉಪಾಯವೇ ಇಲ್ಲ" ಎಂದು ಹೇಳಲು,

ಚಿನ್ನ—ಕೆಲಸಮಾಡುವ ಬಗ್ಗೆ ನನಗೆ ದುಃಖವಾಗುವದಿಲ್ಲ ಅವ್ವಾ, ಬೇಕಾದಷ್ಟು ಕೆಲಸಗಳನ್ನು ನಾನು ಒಳ್ಳೇ ಹುರುಪಿನಿಂದ ಮಾಡೇನು? ಚಿಗವ್ವನು ಬೈಯ್ದರೂ, ಅಂದರೂ ನನಗೆ ಅಷ್ಟು ಖೇದವೆನಿಸುವದಿಲ್ಲ. ಅವರು ದೊಡ್ಡವರಿರುವದರಿಂದಲೂ, ಅವರ ಹುಟ್ಟು ಗುಣವೇ ಅದಾದ್ದರಿಂದಲೂ ಅವರು ಬೇಕಾದಷ್ಟು ಅನ್ನಲಿ; ಆದರೆ ಈ ಕಾಟ-ಈ ಉಪವಾಸ ನನ್ನಿಂದ ಸಹನವಾಗಲಾ........

ಮಗಳ ಈ ಮಾತನ್ನು ಕೇಳಿ ಸ್ವಂತಕ್ಕೆ ಅತ್ಯಂತ ದುಃಖವಾಗಿದ್ದರೂ ಅದನ್ನು ಅವಳಿಗೆ ತೋರಗೊಡದೆ ಗಂಗವ್ವನು—ತಂಗೀ, ಅದಕ್ಕಾಗಿ ನಿನಗೆ ಅಷ್ಟು ದುಃಖವಾಗುತ್ತದೇನು? ಅದಕ್ಕೆ ಖೇದಪಟ್ಟರೆ ಹ್ಯಾಗೆ ನಡೆದೀತು? ನಿನಗೆ ಒಬ್ಬ ದುಷ್ಟ ಅತ್ತೆಯು ಗಂಟುಬಿದ್ದರೆ ಅವಳ ಕೈಯಲ್ಲಿ ನೀನು ಹೇಗೆ ನಡಕೊಳ್ಳುವಿ? ನಿಮ್ಮ ಚಿಗವ್ವನು ನಿನಗೆ ಬಹಳ ಕಾಡಿಸುತ್ತಾಳೆಂದು ನೀನು ತಿಳಿದಿರುವೆ, ಆದರೆ ನಿನಗೆ ಅವಳು ಸಹನಶೀಲತೆಯ ಪಾಠವನ್ನೇ ಕಲಿಸುತ್ತಿರುವಳೆಂಬದು ನೀನು ಗ್ರಹಿಸುವದಿಲ್ಲ. ಆದರಂತೆಯೇ ಉಪವಾಸದ ಮಾತು. ನಾಳೆ ನೀನು ದೊಡ್ಡವಳಾದ ಬಳಿಕ ನಿನ್ನ ಅತ್ತೆಯ ಮನೆಯ ರಿವಾಜಿನ ಪ್ರಕಾರ ದೇವರ ಕಾರ್ಯಕ್ಕೆಂದು ನೀನು ಎಷ್ಟೋ ದಿನ ಒಂದೊತ್ತು ಹಾಗು ಉಪವಾಸಗಳನ್ನು ಮಾಡಬೇಕಾಗುವದಿಲ್ಲವೇ?

ಹೀಗೆ ನಾನಾ ಪ್ರಕಾರವಾಗಿ ಬೋಧಿಸಿ, ಪ್ರೇಮಯುಕ್ತಳಾದ ತನ್ನ ಮಕ್ಕಳ ಪ್ರವೃತ್ತಿಗೆ ಗಂಗವ್ವನು ಒಡ್ಡನ್ನು ಹಾಕುತ್ತಿದ್ದಳು.





## [೭]

ಮಧ್ಯಾಹ್ನಹೊತ್ತು. ಬಿಸಿಲಿನ ತಾಪವು ಪ್ರಖರವಾಗಿತ್ತು. ಪಶು,ಪಕ್ಷಿ, ಹುಳಹುಪ್ಪಡಿ ಮೊದಲಾದ ಎಲ್ಲ ಪ್ರಾಣಿಗಳು ತಂಪಾದ ನೆಳಲನ್ನು ಆಶ್ರಯಿಸಿ ವಿಶ್ರಾಂತಿ ಹೊಂದುತ್ತಲಿದ್ದವು. ಆದರೆ ಸೃಷ್ಟಿನಿಯಮದ ಪ್ರಕಾರ ಆ ವಿಶ್ರಾಂತಿ ಸುಖವು ಎಲ್ಲರಿಗೂ ಲಭಿಸದಿರುವದು ಸ್ವಾಭಾವಿಕವು. ಗಂಗವ್ವನು ಹಾಸಿಗೆಹಿಡಿದಂದಿನಿಂದ ಚಿನ್ನವ್ವನೇ ತನ್ನ ಚಿಗವ್ವನ ಮನೆಯ ಎಲ್ಲ ಕೆಲಸಗಳನ್ನು ಮಾಡುತ್ತಿದ್ದಳಷ್ಟೇ? ಆದರೆ ಚಿಗವ್ವನ ಬಾಯಿಯಿಂದ ಹೊರಟ ಒಂದು ಸಮಾಧಾನದ ಶಬ್ದವನ್ನು ಕೂಡ ಆಕೆಯು ಕೇಳಿದ್ದಿಲ್ಲ. ಇಂದು ಚಿನ್ನವ್ವನು ಅಡಿಗೆ-ಊಟ-ಕಸ-ಮುಸರಿಗಳನ್ನು ಮಾಡಿ ಅಕ್ಕಿ-ಬೇಳೆಗಳನ್ನು ಹಸನಾಗ ಮಾಡುತ್ತಿದ್ದಳು. ಅವಳ ಬಳಿಯಲ್ಲಿಯೇ ಬಸವ್ವನು ಕುಳಿತಿದ್ದಳು. ಆ ಅಚ್ಛದ ಕೂಸು-ಬಸವ್ವನು- ಹಸನಾಗಿ ಮಾಡುತ್ತಿರುವ ಅಕ್ಕಿ-ಬೇಳೆಗಳಲ್ಲಿ ಚಿನ್ನವ್ವನಿಗೆ ತಿಳಿಯದಹಾಗೆ ಹರಳು-ಹೆಂಟೆಗಳನ್ನು ಚೆಲ್ಲುತ್ತ ತನ್ನ ಮನಸ್ಸನ್ನು ವಿನೋದಪಡಿಸುತ್ತಿದ್ದಳು. ಸಾವಕ್ಕನು ಅಟ್ಟದ ಮೇಲಿದ್ದಳು. ಇಷ್ಟರಲ್ಲಿ ದೈವಜ್ಞರಾದ ಮುಗುಟಯ್ಯನವರು ಅವರ ಮನೆಗೆ ಬಂದರು. ಅವರನ್ನು ಕಂಡಕೂಡಲೆ ಆ ಸುದ್ದೀ ಹೇಳುವ ಸಲುವಾಗಿ ಬಸವ್ವನು ಧಡ್ ಧಡ್ ಎಂದು ಪಾವಟಿಗೆಗಳನ್ನು ಏರುತ್ತ ಅಟ್ಟದ ಮೇಲೆ ಹೋದಳು.

ಬಸವ್ವನು ಹೊರಟು ಹೋದಮೇಲೆ ಮುಗುಟಯ್ಯನವರು ಚಿನ್ನವ್ವನನ್ನು ಕುರಿತು—ತಂಗೀ ಚಿನ್ನವ್ವಾ, ನಿಮ್ಮ ಅವ್ವನಿಗೆ ಹೇಗೆ ಅದೆ? ಎಂದು ಕೇಳಿದರು.

ಚಿನ್ನ—ಇದ್ದಹಾಗೆಯೇ ಇರುತ್ತದೆ. ಬರಬರುತ್ತ ಅವಳು ಅಶಕ್ತಳಾಗುತ್ತ ನಡೆದಿದ್ದಾಳೆ. ಅಪ್ಪನವರೇ, ನಿಮಗೇನಾದರೂ ಔಷಧ ಗೊತ್ತಿದ್ದರೆ ಹೇಳಬಾರದೇ?

ಇಷ್ಟರಲ್ಲಿ ಸಾವಕ್ಕನು ಕೆಳಗಿಳಿದು ಬಂದಳು. ಅವಳ ಕೈಯಲ್ಲಿ ಮಡಿಚಿದ ಒಂದು ಕಾಗದವಿತ್ತು. ಮುಗುಟಯ್ಯನವರು ಚಿನ್ನವ್ವನೊಡನೆ ಮಾತಾಡುತ್ತಿರುವದನ್ನು ಕಂಡು ಸಾವಕ್ಕನಿಗೆ ಸಹನವಾಗಲಿಲ್ಲ. ಕೂಡಲೆ ಅವಳು—ಚಿನ್ನೀ, ಅರಿವೆ ಸೆಳೆಯುವದಾಯಿತೇನು? ಎಂದು ಕರ್ಕಶ ಧನಿಯಿಂದ ಕೇಳಿದಳು.

"ಆಯಿತು" ಎಂದು ಚಿನ್ನವ್ವನು ಮೆಲ್ಲನೆ ಹೇಳಿದಳು. "ಹಾಗಾದರೆ ಇಂದು ನೀನು ನನ್ನ ಸೀರೆಯನ್ನೆಲ್ಲ ಒಗೆಯುವದಿಲ್ಲ. ಆ ಕೆಲಸವನ್ನು ದಿನಾಲು ನಿನಗೆ ಹೇಳಬೇಕೇನ? ಹೋಗು, ಅಟ್ಟದ ಮೇಲಿರುವ ನನ್ನ ಸೀರೆಯನ್ನು ಒಯ್ದು ಚಲೋತ್ನಾಗಿ ಮಡಿಮಾಡಿಕೊಂಡು ಬಾ."

"ಚಿಗವ್ವಾ, ಈಗ ಬಿಸಿಲು ಬಹಳವದೆ. ತುಸ ತಡೆದು ಹೋಗು....."

"ಬ್ಯಿಸಿಲ್ಯು ಬ್ಯಹಳ ಅ್ಯದೆ. ತ್ಯುಸ ತ್ಯಡ್ಯೆದು ಹ್ಯೋಗುತ್ತೇನೆ" ಎಂದು ಅಣಗಿಸುತ್ತ ತನ್ನ ನೆಟ್ಟ ಸೊಟ್ಟ ಕೈಯನ್ನು ಚಿನ್ನವ್ವನ ಮೋರೆಗೆ ತಿವಿಯುತ್ತ ಸಾವಕ್ಕನು— ಹೋಗು, ಹೋ......, ಬಹಳ ಸೂಕ್ಷ್ಮವಂತಿ, ಬಿಸಿಲೊಳಗೆ ಹೋದರೆ ಬತ್ತಿಯೇ ಹೋದಾಳು. ಏಳು ಮೊದಲು, ಹೊರಡು ಇಲ್ಲಿಂದ, ಎಂದು ಸಿಟ್ಟುಮಾಡಿ ಕಳಿಸಿದಳು.

ಚಿನ್ನವ್ವನು ಸುಮ್ಮನೆ ಎದ್ದು, ಅಟ್ಟದ ಮೇಲಿನ ಸೀರೆ ತಕ್ಕೊಂಡು, ಹೊರಗೆ ಪ್ರಖರವಾದ ಬಿಸಿಲಿದ್ದರೂ ಹಿತ್ತಲದೊಳಗೆ ಒಗೆಯಲಿಕ್ಕೆ ಹೋದಳು.

ತನ್ನ ದುಷ್ಟಸ್ವಭಾವಕ್ಕನುಸರಿಸಿ ಸಾವಕ್ಕನು ಹೀಗೆ ಮಾಡಿದ್ದೇನೂ ಆಶ್ಚರ್ಯವಲ್ಲ; ಆದರೆ ಇಂದಿನ ಪ್ರಸಂಗವು ಬೇರೆ ಇದ್ದುದರಿಂದ ಅವಳು ಹೀಗೆ ಮಾಡತಕ್ಕದ್ದಿದ್ದಿಲ್ಲ; ಯಾಕಂದರೆ ಇಂದು ಅವಳು ದೈವಜ್ಞ ಮುಗಟಯ್ಯನವರನ್ನು ಒಂದು ಮಹತ್ವದ ಕೆಲಸಕ್ಕಾಗಿ ಕರೆಕಳುಹಿದ್ದಳು. ಶಂಕರಪ್ಪನು ಸಾಲೀಶರಣಪ್ಪನವರ ಮನೆಯ ಸಲುವಾಗಿ ಸಾವಕ್ಕನನ್ನು ಕಳಿಸಿ ಅವಳ ತವರುಮನೆಯಿಂದ ಐನೂರು ರೂಪಾಯಿಗಳನ್ನು ತರಿಸಿ ನಾಲ್ಕು ವರ್ಷವಾಗಿತ್ತು. ಆ ರೂಪಾಯಿಗಳ ವಿನಿಯೋಗವನ್ನು ಅವನು ಹ್ಯಾಗೆ ಮಾಡಿದ್ದನೆಂಬದು ನಮ್ಮ ವಾಚಕರಿಗೆ ಗೊತ್ತೇ ಇದೆ ರಾಮಪ್ಪನ ಸಹವಾಸದಿಂದ ಆ ಹಣವನ್ನೆಲ್ಲ ಹಾಳು ಮಾಡಿದ ಬಳಿಕ ಮನೆಯನ್ನು ಕೊಂಡುಕೊಳ್ಳುವ ವಿಷಯವಾಗಿ ಆತನು ತನ್ನ ಹೆಂಡತಿಗೆ ಏನೇನೋ ನೆವ ಹೇಳಿ ಕಾಲಹಾಕುತ್ತಿದ್ದನು. ಸಾವಕ್ಕನು ಬಹಳೇ ಉಪಟಳ ಕೊಡಹತ್ತಿದಾಗ ಒಮ್ಮೆ ಆತನು "ಶರಣಪ್ಪನವರ ಮನೆಯ ಸಲುವಾಗಿ ಯಾವ ಹಣವನ್ನು ನಿನ್ನಿಂದ ತರಿಸಿದೆನೋ ಅದನ್ನೆಲ್ಲ ಹಾಗೆಯೇ ಬಸವ್ವನ ಲಗ್ನಕ್ಕೆಂದು ತೇವು ಇಟ್ಟಿರುತ್ತೇನೆ. ಯಾಕಂದರೆ, ಆ ಮನೆಯನ್ನು ನಮ್ಮ ಶೇಟನು ತಾನೇ ಕೊಂಡುಕೊಂಡನು." ಎಂದನು. ಮನೆಯಿಲ್ಲದಿದ್ದರೆ ತನ್ನ ಮಗಳ ಲಗ್ನಕ್ಕಾದರೂ ಹಣದಕೊರತೆಯಿಲ್ಲವೆಂಬ ಉಬ್ಬಿನಿಂದ ಸಾವಕ್ಕನು ಮಗಳಿಗೆ ವರನನ್ನು ಗೊತ್ತುಮಾಡಬೇಕೆಂದು ಗಂಡನಿಗೆ ತಿಳಿಸಿದಳು. ನನ್ನಿಂದ ಆ ಕೆಲಸವಾಗದು, ನೀನೇ ನಿನ್ನ ಮನಸ್ಸಿಗೆ ತಕ್ಕ

ವರನನ್ನು ನೋಡಿ ನನಗೆ ತಿಳಿಸು. ಅಂದರೆ ಆ ಕೂಡಲೆ ಲಗ್ನ ಮಾಡೋಣವೆಂದು ಶಂಕರಪ್ಪನು ತಿಳಿಸಿದನು. ಅಂದಿನಿಂದ ಸಾವಕ್ಕನಿಗೆ ಇದೊಂದು ಹೊಸ ಕಾಮಗಾರಿಯೇ ಸಿಕ್ಕಂತಾಗಿತ್ತು. ಆ ಕಾರ್ಯಕ್ಕಾಗಿಯೇ ಇಂದು ಅವಳು ಗೈವಜ್ಞ ಮುಗುಟಯ್ಯನನ್ನು ಕರೆಸಿಕೊಂಡಿದ್ದಳು.

"ಏನಿರಿ, ಅಯ್ಯನವರೇ, ಇತ್ತೀಚೆಗೆ ನೀವೊಂದು ಹೊಸ ಧಂದೆಯನ್ನು ತೆಗೆದಿರುವಿರೆಂತಲ್ಲ." ಎಂದು ಚೆನ್ನವ್ವನು ನೀರೊಲೆಗೆಯ ಲಗ್ಗೆ ಹೊಂಟು ಹೋದಬಳಿಕ ಅಯ್ಯನವರಿಗೆ ಸಾವಕ್ಕನು ನುಡಿದಳು.

"ಇಲ್ಲವಮ್ಮಾ, ಎಲ್ಲಿಯ ಧಂದೆ? ನಮಗು ಎಷ್ಟಂದು ಉದ್ಯೋಗ? ಮದುವೆಯ ಹಂಗಾಮವು ಸಮಾಪಿಸಿರುವದರಿಂದ ನಾವಾದರೂ ಕೆಲಸ ಮಾಡಬೇಕಲ್ಲವೆ? ಈ ವೇಳೆಯಲ್ಲಿ ನಾಲ್ಕು ದುಡ್ಡು ಗಳಿಸದಿದ್ದರೆ, ಉಳಿದ ವೇಳೆಯಲ್ಲಿ ನಮ್ಮನ್ನಾರು ಮಾತಾಡಿಸುವರು?"

"ಹಾಗಾದರೆ ನಮ್ಮ ಬಸವ್ವನ ಬಗ್ಗೆ ನೀವು ಏನು ಮಾಡಿದಿರಿ?" ತುಸ ತಡೆದು ಮುಗುಟಯ್ಯನು ಉತ್ತರ ಕೊಡುವ ಮೊದಲೇ ಸಾವಕ್ಕನು ಪುನಃ—ಏನಿರೀ ಅಯ್ಯನವರೇ, ನಾನೊಂದು ಸಂಗತಿಯನ್ನು ಕೇಳಿದ್ದೇನೆ. ಅದನ್ನು ನಿಮಗೆ ಕೇಳಲೋ ಬೇಡವೆಂದು ನನಗೆ ಅನಿಸುತ್ತದೆ. ಆದರೂ ಗಟ್ಟಿಧೈರ್ಯಮಾಡಿ ಕೇಳುತ್ತೇನೆ. ಆ ವೇಣಪುರದ ಶೆಟ್ಟರ ಮಗನಿಗೆ ಕನ್ಯಾ ನಿಶ್ಚಯಿಸುವ ಕೆಲಸವು ನಿಮ್ಮ ಕಡೆಗೇ ಬಂದಿದ್ದು ಅಹುದೇನು? ಹಾಗಿದ್ದರೆ ನಮ್ಮ ಬಸವ್ವನ ಬಗ್ಗೆ ಲಕ್ಷ್ಯ ಕೊಡಿರಿ. ಹ್ಯಾಗೂ ನೀವು ನಾಲ್ಕು ದುಡ್ಡು ಗಳಿಸಬೇಕೆನ್ನುವವರು. ಅಂದ ಮೇಲೆ ಅನುಮಾನವೇಕೆ?

"ಅಹುದು-ಆದರೆ-ಆದರೆ"

"ಅಷ್ಟು ಸಂಶಯವೇಕೆ? ಇಗೋ ತೆಗೆದುಕೊಳ್ಳಿರಿ ನಮ್ಮ ಬಸವ್ವನ ಈ ಜಾತಕವನ್ನು." ಹೀಗೆಂದು ಸಾವಕ್ಕನು ತನ್ನ ಕೈಯೊಳಗಿನ ಕಾಗದವನ್ನು ಮುಗುಟಯ್ಯನ ಕೈಗಿತ್ತಳು.

ಆ ಜಾತಕವನ್ನು ತಕ್ಕೊಳ್ಳಬೇಕೋ ಬಾರದೋ ಎಂಬ ಬಗ್ಗೆ ಅಯ್ಯನವರಿಗೆ ಅನುಮಾನವಾಯಿತು. ಯಾಕೆಂದರೆ ಜಾತಕದೊಳಗಿನ ಗ್ರಹಕುಂಡಲಿಯಿಂದ ಬಸವ್ವನ ಗುಣಗಳು ವೇಣಪುರದ ಶೆಟ್ಟರ ಮಗನ ಗುಣಗಳಿಗೆ ಕೂಡಲಿ-ಕೂಡದಿರಲಿ, ಮನೆಯೊಳಗಿನ ಪ್ರತ್ಯಕ್ಷ ಆಚರಣೆಯ ಮೇಲಿಂದ ಬಸವ್ವನಂಥ ದುರ್ಗುಣಶಿರೋಮಣಿಯನ್ನು ಶೆಟ್ಟರಂಥ ಸೌಜನ್ಯಪೂರ್ಣರ ಕೊರಳಿಗೆ ಕಟ್ಟಲು ಪ್ರಯತ್ನ

ಮಾಡುವದೇ ಅವನಿಗೆ ಸೇರದಾಯಿತು. ಆದರೆ ಜಾತಕದ ಕಾಗದವು ತನ್ನ ಕೈಗೆ ಬಂದ ಬಳಿಕ ಅದನ್ನು ಹಾಗೇ ತಿರುಗಿ ಕೊಡುವದು ಆ ಭಿಡಸ್ತ ಸ್ವಭಾವದ ಅಯ್ಯಪ್ಪನ ಕಡೆಯಿಂದ ಆಗಲಿಲ್ಲ. ಆ ದೈವಜ್ಞನು ಅದರ ಮಡಿಕೆಯನ್ನು ಬಿಚ್ಚಿ ಜಾತಕವನ್ನು ಓದಿಕೊಂಡು ಬೊಟ್ಟು ಹಾಕಿ ಏನೇನೋ ಗುಣಿಸಿಕೊಳ್ಳ ಹತ್ತಿದನು. ಅವನು ಎಷ್ಟೋಹೊತ್ತಿನ ವರೆಗೆ ಲೆಕ್ಕ ಹಾಕಿದನು ಕಾಲ ಕ್ರಮಿಸಿದ ಹಾಗೆಲ್ಲ ಆ ದೈವಜ್ಞನ ಮೋರೆಯ ಮೇಲೆ ನಿರಾಶೆಯ ಲಕ್ಷಣವೇ ವಿಶೇಷವಾಗಿ ತೋರಹತ್ತಿತು. ಇತ್ತ ಇದನ್ನು ಲಕ್ಷ್ಯಗೊಟ್ಟು ನಿರೀಕ್ಷಿಸುತ್ತಿದ್ದ ಸಾವಕ್ಕನ ಹೌಹಾರಹತ್ತಿತು. ಆಗ ತಡೆಯಲಾರದೆ ನಡುವೇ ಬಾಯಿಹಾಕಿ ಅವಳು —ಯಾಕರೀ, ಮುಗುಟಯ್ಯಾನವರೇ, ಒಳ್ಳೇ ವಿಚಾರದಲ್ಲಿ ಬಿದ್ದಿರುವಿರಿ?

"ಏನೂ ಇಲ್ಲ" ಎಂದು ಅಯ್ಯನವರು ಮೆಲ್ಲನೆ ನುಡಿದರು.

"ಹಾಗಾದರೆ ಈ ಜಾತಕವು ಆ ಶೆಟ್ಟರ ಮಗನ ಜಾತಕಕ್ಕೆ ಕೂಡುವದಷ್ಟೆ?"

"ಛೇ; ನಿಮ್ಮ ಮಗಳ ಜಾತಕವು ಆ ಹುಡುಗನ ಜಾತಕಕ್ಕೆ ಕೇವಲ ವಿರೋಧವಾಗಿದೆ. ಅಂದಮೇಲೆ ಕೂಡುವ ಬಗೆ ಹೇಗೆ?" ಎಂದೆನ್ನುತ್ತ ಆ ಜಾತಕವನ್ನು ಅಯ್ಯನವರು ಕೆಳಗಿಟ್ಟರು

ಶೆಟ್ಟರ ಮಗನೊಡನೆ ತನ್ನ ಮಗಳ ಲಗ್ನವು ಕೂಡುವದಿಲ್ಲೆಂಬದನ್ನು ಕೇಳಿ ಸಾವಕ್ಕನು ಗಹನವಾದ ವಿಚಾರದಲ್ಲಿ ತೊಡಗಿದಳು. ಈ ದೈವಜ್ಞ-ಅಯ್ಯಪ್ಪ-ನ ಕೈಬೆಚ್ಚಗೆ ಮಾಡಿ ಈತನನ್ನು ಒಲಿಸಿಕೊಳ್ಳದ ಹೊರತು ತಮ್ಮ ಬಸವ್ವನನ್ನು ಶೆಟ್ಟರ ಮಗನಿಗೆ ಕೊಡಲಿಕ್ಕೆ ಸಾಧ್ಯವಿಲ್ಲ[illegible] ಖಾತ್ರಿಯಾಯಿತು. ಆ ಬಗ್ಗೆ ಅವಳು ಇನ್ನು ಮುಗುಟಯ್ಯನವರೊಡನೆ ಸಂಧಾನ ಕಟ್ಟತಕ್ಕವಳು; ಅಷ್ಟರಲ್ಲಿ ಅವಳಿಗೆ ಮತ್ತೊಂದು ಸಂಗತಿಯು ನೆನಪಾದ್ದರಿಂದ ಅವಳು ಧಾವಿಸುತ್ತ ಅಟ್ಟವನ್ನು ಏರಿ ಹೋದಳು.

ಬಸವ್ವನು ಈ ನಡುವೆ ಅಲ್ಲಿಯೇ ಕುಳಿತು ಚಿನ್ನವ್ವನು ಹಸನಾಗಿ ಮಾಡಿಟ್ಟಿದ್ದ ಅಕ್ಕಿ-ಬೇಳೆಗಳಲ್ಲಿ ಕಲ್ಲುಮಣ್ಣುಗಳನ್ನು ಒಗೆಯುತ್ತಿದ್ದಳು. ಅದನ್ನು ಸಹಿಸದಾದ ಮುಗುಟಯ್ಯನವರು ಆಕೆಗೆ ಅಂದದ್ದು...

"ಬಸವ್ವಾ, ಇದೇನು ಕೆಲಸ ಮಾಡುತ್ತೀಯವ್ವಾ? ಪಾಪ! ಆ ಹುಡುಗೆಯು ಹಸನಾಗಿ ಮಾಡಿಡಬೇಕು, ನೀನು ಮತ್ತೆ ಅದರಲ್ಲಿ ಕಲ್ಲು-ಮಣ್ಣು ಒಗೆಯಬೇಕು. ಇದೇನು ಚಂದ?"

"ಏನಾಯಿತು? ಮತ್ತೆ ಹಸನಮಾಡಿಯಾಳು. ಇಷ್ಟೇ ಅಲ್ಲವೆ?'' ಎಂದೆಂದು ಬಸವ್ವನು ಖೊಳ್ಳನೆ ನಕ್ಕಳು.

ಕುಸಹೊತ್ತಿನಲ್ಲಿ ಸಾವಕ್ಕನು ಅಲ್ಲಿಗೆ ಬಂದಳು. ಅವಳು ಬೇರೊಂದು ಜಾತಕವನ್ನು ಮುಗುಟಯ್ಯನವರ ಮುಂದೆ ಇಟ್ಟಳು. ಅಯ್ಯನವರು ಅದನ್ನು ಎತ್ತಿಕೊಂಡು ನೋಡತೊಡಗಿದರು. ಮೊದಲಿನ ಪತ್ರಿಕೆಯನ್ನು ನೋಡಬೇಕಾದರೆ ಅಯ್ಯನವರ ಮೋರೆಯು ಹೇಗೆ ವಿಕಾರವಶವಾಗುತ್ತಿತ್ತೋ, ಈಗ ಹಾಗೇನೂ ಆಗದೆ, ಬರಬರುತ್ತ ಆನಂದದ ಕಳೆಯಿಂದ ಉಕ್ಕೇರತೊಡಗಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಅವನು ಆ ಜಾತಕವನ್ನು ನೋಡುವದರಲ್ಲಿ ಒಳ್ಳೇ ತಲ್ಲೀನನಾಗಿ, ಚಟಕ್ಕನೆ ಎದ್ದು ನಿಂತು ತನ್ನ ಒಳಅಂಗಿಯೊಳಗಿನ ಒಳಕಿಸೆಯಲ್ಲಿದ್ದ ಒಂದು ಜಾತಕವನ್ನು ತೆಗೆದು ಅದರೊಳಗೆ ನೋಡತಕ್ಕ ವಿಷಯವನ್ನು ನೋಡಿ—ಈ ಜಾತಕದೊಡನೆ ಶೆಟ್ಟರ ಮಗನ ಜಾತಕವು ಪರಿಪೂರ್ಣವಾಗಿ ಕೂಡುತ್ತದೆ'' ಎಂದು ಉದ್ಗಾರ ತೆಗೆದನು.

"ಏನಂದಿರಿ, ಜಾತಕಗಳು ಸಂಪೂರ್ಣವಾಗಿ ಕೂಡಿದವೆ? ಹಾಗಾದರೆ ಇದೇ ಜಾತಕವು ನಮ್ಮ ಬಸವ್ವನದು'' ಎಂದು ಸಾವಕ್ಕನು ಅಂದಳು.

"ಈ ಜಾತಕವು ನಿಮ್ಮ ಬಸವ್ವನದೆನ್ನುವಿರಾ? ಸಾವಕ್ಕಾ ನೀವು ಅನ್ನುವದಾದರೂ ಏನು!'' ಎಂದು ಆಶ್ಚರ್ಯಪಡುತ್ತ ಮುಗುಟಯ್ಯನವರು—"ಛೇ! ಹಾಗೆಂದಿಗೂ ಆಗದು'' ಎಂದೆಂದು ಸಾವಕ್ಕನು ಕೊಟ್ಟ ಆ ಎರಡನೇ ಜಾತಕದ ಶಿರೋಲೇಖವನ್ನು ಮತ್ತೊಮ್ಮೆ ಓದತೊಡಗಿದರು. ಅದರಲ್ಲಿ "ವೀರಪ್ಪನವರ ಹೆಂಡತಿಯಾದ ಗಂಗಮ್ಮನು ಇಷ್ಟನೇ ಶಾಲಿವಾಹನ ಸಂವತ್ಸರದ ಇಂಥ ಮಾಸದ ಇಂಥ ಪಕ್ಷದ ಇಂಥ ತಿಥಿಯಲ್ಲಿ ಕನ್ಯಾರತ್ನವನ್ನು ಪ್ರಸವಿಸಿದಳು. ಆ ಕನ್ನೆಯ ಹೆಸರನ್ನು ಚಿನ್ನವ್ವಾ ಎಂದು ಇಟ್ಟದೆ'' ಎಂದು ಸ್ಪಷ್ಟವಾಗಿ ಬರೆದು, ಕೆಳಗೆ ಗ್ರಹಕುಂಡಲಿಯನ್ನು ಹಾಕಿದ್ದರು. ಆಗ ಸಾವಕ್ಕನು ಅಯ್ಯನವರ ಕೈಯೊಳಗಿನ ಆ ಪತ್ರಿಕೆಯನ್ನು ಒಮ್ಮೆಲೆ ಕಸಗೊಂಡು, ಅವರಿಗೊಂದು ಕಣ್ಸನ್ನೆಯನ್ನು ಮಾಡಿದಳು. ಬಳಿಕ ಅವರೀರ್ವರಲ್ಲಿ ಎಷ್ಟೋ ಹೊತ್ತಿನ ವರೆಗೆ "ಗುಣುಗುಣು'' ಭಾಷಣವಾಯಿತು. ಅವರು ಅಷ್ಟು ಮೆಲ್ಲಗೆ ಮಾತಾಡಹತ್ತಿದ್ದರಿಂದ ದೂರದಲ್ಲಿ ನಿಂತು ಕೇಳುವ ನಮಗೆ ಅದು ಹೇಗೆ ಕೇಳಿಸಬೇಕು?

ಕಡೆಗೆ ಅಯ್ಯನವರು ಸಾವಕ್ಕನ ಮಾತಿಗೆ ಒಪ್ಪಿದಂತೆ ಆಯಿತು. ಯಾಕಂದರೆ ಅವರು ಅಲ್ಲಿಂದ ಹೊರಡಲುದ್ಯುಕ್ತರಾಗಲು ಸಾವಕ್ಕನು—ಅಯ್ಯನವರೇ, ಹಾಗಾದರೆ ನಮ್ಮ ಬಸವ್ವನನ್ನು ಶೆಟ್ಟರ ಮಗನಿಗೇ ನಿಶ್ಚಯಿಸುವಿರಾ? ನೋಡಿರಿ,

ನಾನು ಅಂದಂತೆ ನೀವು ಎಲ್ಲ ಕೆಲಸ ಮಾಡಿದರೆ, ನೀವು ಕೇಳಿರುವಂತೆ ನಿಮಗೆ ಮರ್ಯಾದೆ ಮಾಡಲಿಕ್ಕೆ ಈ ಸಾವಕ್ಕನು ತಪ್ಪಲಾರಳು.

"ಒಳ್ಳೇದು, ಹಾಗೆ ಆಗಲಿ; ಹೋಗಿಬರುತ್ತೇನೆ" ಎಂದು ಹೇಳಿ ಮುಗುಟಯ್ಯನವರು ಸಾವಕ್ಕನು ಕೊಟ್ಟ ಆ ಎರಡೂ ಜಾತಕಗಳನ್ನು ಒಕ್ಕಣದೊಳಗಿಟ್ಟುಕೊಂಡು ತಮ್ಮ ಮನೆಯ ಹಾದೀಹಿಡಿದರು.

ಮುಗುಟಯ್ಯನವರನ್ನು ಕಳಿಸಲಿಕ್ಕೆ ಸಾವಕ್ಕನು ತನ್ನ ತಲೆಬಾಗಿಲುಒಳಿಗೆ ಬರಲಿಕ್ಕೂ ಎದುರಿನಿಂದ ಗಿರಣಿಯ ಶಿವಕ್ಕನು ಇತ್ತ ಇವರ ಮನೆಗೇ ಒರಲಿಕ್ಕೂ ಗಂಟೇ ಬಿದ್ದಿತು, ಕೂಡಲೆ ಸಾವಕ್ಕನು ಒಳ್ಳೇ ಸೌಮ್ಯಭಾಷೆಯಿಂದ—

"ಬನ್ನಿರಿ, ಶಿವಕ್ಕನವರೇ ಇತ್ತ ಯಾವ ಕಡೆಗೆ ಬಂದಿರಿ, ಬನ್ನಿರಿ" ಎಂದು ಕರೆದಳು.

ಸಾವಕ್ಕನ ಈ ಸೌಜನ್ಯ ಪೂರ್ಣ ಆಹ್ವಾನವನ್ನೂ ವಿನಯಶೀಲತೆಯನ್ನೂ ಕಂಡು ಶಿವಕ್ಕನು ಸ್ತಂಭಿತಳಾದಳು. ಯಾಕಂದರೆ ತನ್ನನ್ನು ನೋಡಿದ ಕೂಡಲೆ, ತಾನು ಆವಳ ನೆಘೋಣಿಯಾದ ಗಂಗವ್ವನ ಗೆಳತಿಯೆಂದು ತಿಳಿದು, ಯಾವಳ ಮೋರೆಯು ಒಮ್ಮೆಲೆ ಗಂಟಿಕ್ಕುತ್ತಿತ್ತೋ, ಆ ಸಾವಕ್ಕನು ಇಂದು ಇಷ್ಟು ವಿನಯದಿಂದ ತನ್ನನ್ನು ಕರೆಯುವದನ್ನು ನೋಡಿ ಆಕೆಗೆ ಒಳ್ಳೇ ಆಶ್ಚರ್ಯವಾಯಿತು.

ಒಳಗೆ ಬಂದೊಡನೆ ಸಾವಕ್ಕನೇ ಶಿವಕ್ಕನನ್ನು ಕುರಿತು—ಶಿವಕ್ಕಾ, ನಮ್ಮ ಬಸವ್ವನ ಜಾತಕವು ಆ ವೇಣಪುರದ ಶೆಟ್ಟರ ಮಗನ ಜಾತಕಕ್ಕೆ ಚನ್ನಾಗಿ ಕೂಡುವದಂತೆ ಇನ್ನು ಆಕೆಯ ದೈವವು ಹೇಗಿದೆಯೋ ನೋಡಬೇಕು.

"ಹೌದೇನು. ಇದನ್ನು ಕೇಳಿ ನನಗೆ ಬಲು ಸಂತೋಷವೆನಿಸುತ್ತದೆ" ಎಂದಂದು ಶಿವಕ್ಕನು ಪುನಃ—ಅಂತೂ ನಿಮ್ಮ ಬಸವ್ವನ ಮದುವೆಯು ಗೊತ್ತಾದಂತಾಯಿತು.

"ಅಹುದು. ಜಾತಕಗಳಂತೂ ಕೂಡಿದವು. ಇನ್ನು ಆ ಜನರು ಒಪ್ಪಿದರೆ ತೀರಿತು."

"ಅವರು ಒಪ್ಪದೇನು ಮಾಡುವರು? ಆದರೆ ಸಾವಕ್ಕಾ, ನನ್ನದೊಂದು ಮಾತು ಕೇಳುವಿರೇನು? ನಿಮ್ಮ ಮಗನ ಮದವೆ ಮಾಡುವಿರಾ?"

"ಮಗನಾರು? ಹೇಮಾದ್ರಿಗೆಂದಿರಲ್ಲವೆ? ವಧುವೆಲ್ಲಿಯದು?"

"ನನ್ನ ಮಗಳಾದ ಪುಟ್ಟವ್ವನೇ ವಧುವು"

"ಏನಂದಿರಿ, ನಿಮ್ಮ ಮಗಳನ್ನೇ ಹೇಮನಿಗೆ ಕೊಡುವಿರೋ? ನೀವು ಕೊಡುವದಾದರೆ ಒಂದರೊಳಗೊಂದು ಎರಡೂ ಕಾರ್ಯಗಳು ಒಮ್ಮೆಲೇ ಆದಾವು; ಆದರೆ ಹೇಮನ ತಾಯಿಯು ಒಡಂಬಡಬೇಕಲ್ಲವೆ?"

"ಅವರು ಖಂಡಿತವಾಗಿ ಒಪ್ಪುವರು"

"ಹಾಗಾದರೆ ನಾನೂ ಒಪ್ಪುವೆನು."

ತನ್ನ ಮಗಳನ್ನು ಹೇಮಾದ್ರಿಗೆ ತಕ್ಕೊಳ್ಳುವ ಸಲುವಾಗಿ ಸಾವಕ್ಕನು ಇಷ್ಟು ಸಹಜವಾಗಿ ಒಪ್ಪಬಹುದೆಂದು ಶಿವಕ್ಕನಿಗೆ ಅನಿಸಿರಲಿಲ್ಲ. ತನ್ನ ಮಗಳು ಶ್ರೀಮಂತರ ಮನೆಗೆ ಬೀಳುವಳೆಂಬ ಬಗ್ಗೆ ಸಾವಕ್ಕನಿಗೆ ಆದ ಆನಂದದ ಭರದಲ್ಲಿ ಈ ಮುಂದಿನ ಸಂಭಾಷಣವು ನಡೆಯಿತೆಂಬುದು ಪಾಪ! ಆ ಶಿವಕ್ಕನಿಗೆ ಗೊತ್ತಿರಲಿಲ್ಲ. ಸಾವಕ್ಕನು ಅಟ್ಟವನ್ನು ಹತ್ತಿದ ಕೂಡಲೆ ಶಿವಕ್ಕನು ಗಂಗವ್ವನ ಕೋಣೆಗೆ ಹೋದಳು. ಗಂಗವ್ವನಿಗೆ ಕ್ಷಯರೋಗವಾಗಿ ಬಹಳ ವರ್ಷಗಳಾಗಿದ್ದವು. ಈಗಂತೂ ಅವಳ ದೇಹದಲ್ಲಿ ಕೇವಲ ಎಲವು-ಚರ್ಮಗಳು ಅವಶೇಷವಾಗಿದ್ದವು. ಇಂಥ ಸ್ಥಿತಿಯಲ್ಲಿ ಬದುಕುವದಕ್ಕಿಂತ ಸಾಯುವದೇ ಲೇಸೆಂದು ಗಂಗವ್ವನನ್ನು ನೋಡಿದ ಪ್ರತಿಯೊಬ್ಬರೂ ಅನ್ನುತ್ತಿದ್ದರು. ಗಂಗವ್ವನಾದರೂ ಸಾಯಲಿಕ್ಕೆ ಸಿದ್ಧಳೇ ಆಗಿದ್ದಳು; ಆದರೆ ಎರಡು ಮುಂದಿ ಮಕ್ಕಳ ಸಲುವಾಗಿ ಆಕೆಯ ಜೀವವು ದೇಹದಿಂದ ಹೊರಹೊರಡಲೊಲ್ಲದಾಗಿತ್ತು, ಈಗ ಹೇಮಾದ್ರಿಯಂತೂ ಹಾದಿಗೆ ಹತ್ತಿದ್ದನು. ಆದರಿಂದ ಅವನ ವಿಷಯಕವಾಗಿ ಗಂಗವ್ವನಿಗೆ ಅಷ್ಟೊಂದು ಚಿಂತೆಯಾಗುತ್ತಿದ್ದಿಲ್ಲ. ಉಪವರಳಾದ ಚಿನ್ನವ್ವನಿಗಾಗಿ ಅವಳು ಹಗಲೂ-ಇರುಳೂ ಬೆಯ್ಯುತ್ತಿದ್ದಳು. ಚಿನ್ನವ್ವನಿಗೆ ಬಾಸಿಂಗ ಕಟ್ಟಿದ್ದನ್ನು ನೋಡಿದರೆ ತನ್ನ ಜೀವನ ಸಾರ್ಥಕವಾದಂತಾಗಿ ತಾನು ಸುಖದಿಂದ ಸಾಯುವೆನೆಂದು ಅವಳು ಅನ್ನುತ್ತಿದ್ದಳು. ಚಿನ್ನವ್ವನಿಗೆ ಈಗ ಹದಿನಾಲ್ಕು ವರ್ಷಗಳು ತುಂಬುತ್ತ ಬಂದಿದ್ದವು. ಮನೆಯೊಳಗಿನ ಕೆಲಸದ ಹಾಗು ಚಿಗವ್ವನ ಕಾಟದ ಮೂಲಕ ಅವಳು ಬಸವ್ವನಂತೆ ಧಷ್ಟಪುಷ್ಟಳಾಗಿ ತೋರುತ್ತಿದ್ದಿಲ್ಲ. ಆದರೂ ನೈಸರ್ಗಿಕವಾದ ವೈಕಟ್ಟಿನ ಆ ಹೆಣ್ಣುಮಗಳು ಆ ಪ್ರಾಪ್ತ ವಯಸ್ಸಿನಲ್ಲಿ ನಯನಮನೋಹರಳಾಗಿ ಕಾಣಿಸುತ್ತಿದ್ದಳು. ಇರಲಿ. ಶಿವಕ್ಕನು ಬಂದ ಕೂಡಲೆ ನಿಮ್ಮ ಬಸವ್ವನ ಲಗ್ನವು ವೇಣಾಪುರದ ಶೆಟ್ಟರ ಮಗನೊಡನೆ ಕೂಡಿತೆಂಬ ಸುದ್ದಿಯನ್ನು ಗಂಗವ್ವನಿಗೆ ನಿವೇದಿಸಿದಳು. ತನ್ನ ಚಿನ್ನವ್ವನಿಗಿಂತಲೂ ಬಸವ್ವನ ಲಗ್ನವು ಮೊದಲು ನಿಶ್ಚಿತವಾದ ಬಗ್ಗೆ ಗಂಗವ್ವನಿಗೆ ಸ್ವಾಭಾವಿಕವಾಗಿಯೇ ಅಷ್ಟೊಂದು ಸಂತೋಷವಾಗದಿದ್ದರೂ, ಹೇಮಾದ್ರಿಯ ಲಗ್ನಕ್ಕೆ ತನ್ನ

ನೆಘೆಣ್ಣೆಯೂ ಒಪ್ಪಿದಳೆಂಬದನ್ನು ಕೇಳಿ ಆಕೆಗೆ ಸಮಾಧಾನವೆನಿಸಿತು. ಬಳಿಕ ಅವಳು—ಶಿವಕ್ಕಾ, ಒಮ್ಮೆ ನಮ್ಮ ಚಿನ್ನವ್ವನ ಲಗ್ನವಾಯಿತೆಂದರೆ ನಾನು ಗೆದ್ದಂತಾಯಿತು ನೋಡಿರಿ, ಎಂದು ಉಸುರ್ಗಳೆಯುತ್ತ ನುಡಿದಳು.

ಶಿವಕ್ಕಾ—ಅದೂ ಆದೀತು. ಆ ಬಗ್ಗೆ ಇಷ್ಟು ಅಧೀರರಾಗಬೇಡಿರಿ. ಆಕೆಗಾಗಿ ಮನೆತನ ಹುಡುಕುವ ಕೆಲಸವನ್ನು ನಮ್ಮ ಮನೆಯವರು ನಡಿಸಿದ್ದಾರೆ.

ಗಂಗಮ್ಮ—ಶಿವಕ್ಕಾ, ನಿಮ್ಮ ಗಂಡ-ಹೆಂಡಿರ ಈ ಉಪಕಾರಗಳನ್ನು ನಾನು ಎಷ್ಟು ಜನ್ಮ ತಾಳಿ ತೀರಿಸಿದರೂ ತೀರಲಾರವು, ಎಂದಂದು ತನ್ನ ಕಟ್ಟಿಗೆಯಂತಹ ಕೈಯನ್ನು ತನ್ನ ಆ ಗೆಳತಿಯ ಹೆಗಲ ಮೇಲೆ ಚೆಲ್ಲಿದಳು.

ಶಿವಕ್ಕ—ಗಂಗಮ್ಮಾ, ಹಾಗಾದರೆ ನೀವು ನಮ್ಮನ್ನು ಇನ್ನೂ ಪರಕೀಯರೆಂದೇ ತಿಳಿಯುತ್ತೀರಾ? ಹೇಮಾದ್ರಿ ಹಾಗು ಚಿನ್ನವ್ವಾ ಇವರು ನಿಮ್ಮವರೆಂದು ನೀವು ನನಗೆ ಹೇಳಿದುದನ್ನೂ ಮರೆತಿರಾ?

ಶಿವಕ್ಕನ ಈ ಭಾಷಣವನ್ನು ಕೇಳಿ ಗಂಗಮ್ಮನ ಕಣ್ಣೊಳಗಿಂದ ಪ್ರೇಮಾಶ್ರುಗಳು ಧಾರೆಗಟ್ಟಿ ಸುರಿಯಹತ್ತಿದವು.





## [೨]

ಮಾನವ ಪ್ರಾಣಿಗೆ ಪರಿಸ್ಥಿತಿಗನುಸಾರವಾಗಿ ಮಾನಸಿಕ ಸಂಕಟಗಳು ಪ್ರಾಪ್ತವಾಗುತ್ತಿದ್ದರೂ, ಮೊಟ್ಟಮೊದಲಿನ ಆ ತರದ ಸಂಕಟಕ್ಕೆ ಆ ಪ್ರಾಣಿಯೇ ಸ್ವತಃ ಕಾರಣನಾಗಿರುತ್ತಾನೆಂದು ತಜ್ಞರ ಅಭಿಪ್ರಾಯವಿರುತ್ತದೆ; ಮಾನಸಿಕ ಸಂಕಟದ ಬಗ್ಗೆ ಈ ಪ್ರಕಾರ ನಿಶ್ಚಿತಮತವಿದ್ದರೂ ಶಾರೀರಿಕ ಹಾಗು ದೈವಿಕಸಂಕಟಗಳು ಮಾತ್ರ ಆಕಸ್ಮಿಕವಾಗಿ ಯಾವಾಗ ಪ್ರಾಪ್ತವಾದಾವೆಂಬ ಬಗ್ಗೆ ನಿಯಮವಿಲ್ಲ. ಒಬ್ಬ ಸದೃಢ ಹಾಗು ಆನಂದವೃತ್ತಿಯ ಮನುಷ್ಯನು ಸ್ವಾನಂದದಲ್ಲಿ ಮಗ್ನನಾಗಿ ದಾರಿ ನಡೆಯುತ್ತಿರಲು, ಮಾರ್ಗದೊಳಗಿನ ಯಾವದೊಂದು ಗಿಡವಾಗಲಿ, ಮನೆಯ ಮಾಳಿಗೆಯಾಗಲಿ ಆತನ ಮೇಲೆ ಕಡಕೊಂಡು ಬಿದ್ದು ಅವನು ಮೃತನಾಗುವದೂ ಇಲ್ಲವೆ ರೈಲಗಾಡಿಯಿಂದ ಪ್ರವಾಸ ಮಾಡುವ ಪ್ರಯಾಣಿಕನು ಗಾಡಿಗೆ ಅಪಘಾತವಾಗಿ ಸಾಯುವದೂ ಮನುಷ್ಯ ಪ್ರಾಣಿಗೆ ಪ್ರಾಪ್ತವಾಗುವ ದೈವಿಕ ಸಂಕಟಕ್ಕೆ ಉದಾಹರಣೆಗಳಾಗಿವೆ. ಆಕಸ್ಮಿಕವಾಗಿ ಪ್ಲೇಗು ಬೇನೆಬಂದು ಇಲ್ಲವೆ ಬೇರೆ ಯಾವದೊಂದು ರೋಗವಾಗಿ ಮನುಷ್ಯನು ತೊಳಲುವದೂ, ಮೃತ್ಯುಗೀಡಾಗುವದೂ ಶಾರೀರಿಕ ಸಂಕಟವು. ಆದರೆ ಮನುಷ್ಯನಿಗೆ ಪ್ರಾಪ್ತವಾಗುವ ಮಾನಸಿಕ ಸಂಕಟವು ಹೀಗೆ ಆಕಸ್ಮಿಕವಾಗಿ ಪ್ರಾಪ್ತವಾಗದೆ, ಆತನ ಯಾವದೊಂದು ವಿಧದವ್ಯಸನಾಧೀನತೆಯಿಂದಲೇ ಪ್ರಾಪ್ತವಾಗುವದು. ನಮ್ಮ ಭೋಳೇ ಶಂಕರಪ್ಪನಿಗೆ ಈಚೆಗುಂಟಾದ ಮಾನಸಿಕ ಸಂಕಟಗಳಾದರೂ ಇದೇ ಕಾರಣದಿಂದ. ದುರ್ವ್ಯಸನಗಳಿಂದ ದಿನದಿನಕ್ಕೆ ಆತನು ಹೆಚ್ಚು ಅಧಃಪತನವಾಗುತ್ತಿದ್ದರಿಂದ, ಚಿಂತೆಯೆಂಬದೇ ಆತನಿಗೆ ಮಹಾರೋಗವಾಗಿ ಪರಿಣಮಿಸಿತ್ತು. ಸಾವಕ್ಕನ ತವರುಮನೆಯ ಎಲ್ಲ ಹಣವನ್ನು ರಾಮಪ್ಪನಂಥ ದುರ್ಮಿತ್ರರ ಸಹವಾಸದಿಂದ ಹಾಳುಮಾಡಿ, ಸಾಲದುದಕ್ಕೆ ಎರಡು ಸಾವಿರಗಟ್ಲೆ ಸಾಲಮಾಡಿಕೊಂಡಿದ್ದ ಆತನು ಹಣವನ್ನು ಗಳಿಸುವದಕ್ಕಾಗಿ ಹೊಸಹೊಸ ಹಂಚಿಕೆಗಳನ್ನು ಹುಡುಕುತ್ತಿದ್ದನು.

ಇತ್ತೀಚೆಗೆ ಇಡಿರಾತ್ರಿಯಲ್ಲಿ ಒಂದೆರಡು ಗಳಿಗೆಗಳಾದರೂ ಶಂಕರಪ್ಪನಿಗೆ ನಿದ್ರೆ ಹತ್ತುತ್ತಿತ್ತೋ ಇಲ್ಲವೋ? ಯಾವಾಗಲೂ ಚಿಂತಾಮಗ್ನ ಸ್ಥಿತಿಯಲ್ಲಿಯೇ ಆತನು ಕಾಲಕಳೆಯುತ್ತಿದ್ದನು. ಆದರಿಂದ ಆತನ ಮೊದಲಿನ ಶಾಂತಸ್ವಭಾವ,

ಸಹನಶೀಲತೆಗಳು ಲೋಪವಾಗಿ ಪ್ರತಿಯೊಂದು ಮಾತಿಗೂ ಆತನು ಒಳ್ಳೇ ರೇಗಿ ಗೇಳುತ್ತಿದ್ದನು. ತಮ್ಮ ಬಸನ್ನನ ಜಾತಕವು ವೆಣಪುರದ ಶಿವ್ವರ ಮಗನ ಜಾತಕ ದೊಡನೆ ಕೂಡಿದ್ದು ವಿವಾಹಕ್ಕಾದರೂ ಅವರು ಒಪ್ಪಬಹುದೆಂದು ಸಾವಕ್ಕನು ತಿಳಿಸಿ ದಾಗಿನಿಂದಂತೂ ಆತನ ಪ್ರಕೃತಿಯ ಸ್ಥಿತಿಯೇ ಬದಲಾಗಿ ಹೋಗಿತ್ತು. ಲಗ್ನದ ಮುಹೂರ್ತವನ್ನು ಯಾವದಿವಸ ಗೊತ್ತು ಮಾಡಬೇಕು, ಅರವಿ-ಅಂಚಡಿ, ಅಂಗ ಡಿಯ ವೆಚ್ಚ ಇವುಗಳನ್ನು ಎಲ್ಲಿಂದ ಎಷ್ಟೆಷ್ಟು ತರಬೇಕು? ಮುಂತಾದ ಮಾತು ಹೊರಟರಂತೂ ತೀರೇ ಹೋಯಿತು, ಶಂಕರಪ್ಪನು ಹುಚ್ಚುಹಿಡಿದ ನಾಯಿ ಯಂತೆ ವರ್ತಿಸಹತ್ತುವನು. ಆತನು ಈಗ ನಾಲ್ಕಾರು ವರ್ಷಗಳಿಂದ ದುರ್ಮಾರ್ಗ ಪ್ರವೃತ್ತನಾದುದರಿಂದ ಅವನಲ್ಲುಂಟಾದ ಸ್ಥಿತ್ಯಂತರದ ಕಾರಣವನ್ನು ಚೆನ್ನಾಗಿ ಬಲ್ಲ ಸಾವಕ್ಕನು ಗಂಡನ ಕೂಗಾಟದ ಕಡೆಗೆ ಲಕ್ಷ್ಯಗೊಡದೆ ದೈವಜ್ಞ ಮುಗುಟಯ್ಯನ ಸಹಾಯದಿಂದ ಮದುವೆಯನ್ನೂ, ಮುಹೂರ್ತವನ್ನೂ ನಿಶ್ಚಯಮಾಡಿ, ಒಂದೊಂದೇ ಎಂದು ಲಗ್ನದ ಎಲ್ಲ ಸಾಮಾನುಗಳನ್ನು ಅವನಿಂದಲೇ ತರಿಸಿ ಸಂಗ್ರಹಿಸಿ ದಳು; ಹಾಗು ಬೀಗರನ್ನು ಕರೆಯಲಿಕ್ಕೆ ಸಹ ಅವನನ್ನೇ ಕಳಹಿದಳು. ಅವಳು ಬೀಗರಿಗಾಗಿ ತಮ್ಮ ಮನೆಗೆ ಸಮೀಪದಲ್ಲಿರುವ ಒಂದು ಮನೆಯನ್ನು ಗೊತ್ತುಮಾಡಿ ಅದನ್ನು ಸಾರಿಸಿ, ಸುಣ್ಣ ಹಚ್ಚಿಸಿದಳು ಸಹ. ನಾಳೆ ಬೆಳಿಗ್ಗೆಯೇ ಬೀಗರು ಬರುವ ರೆಂಬ ಸಂಗತಿಯು ತಿಳಿದ ಕೂಡಲೆ ಶಂಕರಪ್ಪನಿಗೆ ಸಹಸ್ರ ಚೇಳುಗಳು ಒಮ್ಮೆಲೆ ಕಚ್ಚಿದ ಹಾಗಾಯಿತು. ಈ ಮುಹೂರ್ತ ಬೇಡ; ಇನ್ನೆರಡು ದಿನ ತಡೆ ಎಂದು ತನ್ನ ಹೆಂಡತಿಗೆ ಹೇಳುವಷ್ಟು ಸಾಮರ್ಥ್ಯವು ಕೂಡ ಆತನಲ್ಲಿ ಈಚೆಗೆ ಉಳಿದಿರಲಿಲ್ಲ.

ದುರ್ಮಿತ್ರರ ಸಂಗತಿಯಿಂದಲೂ ಹಾಗು ಸ್ವಂತದ ಮೂರ್ಖತನದಿಂದಲೂ ಶಂಕರಪ್ಪನು ತನ್ನ ಮೈಮೇಲೆ ಎಷ್ಟೋ ಬೋಜುಗಳನ್ನು ಹಾಕಿಕೊಂಡಿದ್ದನು. ಶಂಕರಪ್ಪನಿಗೆ ಅಲ್ಪಸ್ವಲ್ಪವಾದರೂ ಮೂಲಮನೆ ಉಳಿಯುವದೆಂದು ತಿಳಿದಿದ್ದ ಸಾವುಕಾರ ಜನರು ಈ ವರೆಗೆ ತಮ್ಮ ಹಣದಬಗ್ಗೆ ಏನೂ ಆಲೋಚನೆಮಾಡದೆ ಸುಮ್ಮನೆ ಕುಳಿತಿ ದ್ದರು; ಆದರೆ ತಮ್ಮ ತಿಳವಳಿಕೆಯು ತಪ್ಪಾದದ್ದೆಂದು ತಿಳಿದರೆ, ಅವರೆಲ್ಲರೂ ಕೂಡಿ ತನ್ನನ್ನು ಶೂಲಕ್ಕೇ ಏರಿಸುವರೆಂದು ಶಂಕರಪ್ಪನಿಗೆ ಚೆನ್ನಾಗಿ ಗೊತ್ತಿತ್ತು. ಈಗ ಆತನ ಮನೆಯಲ್ಲಿ ತೀವ್ರವೇ ಆತನ ಮಗಳ ಮದುವೆಯಿದ್ದದರಿಂದ ಆತನಿಗೆ ದುಡ್ಡಿನ ಅವಶ್ಯಕತೆಯಿತ್ತು. ಇಷ್ಟು ದೊಡ್ಡ ಸಾಲಗಾರ ಮನುಷ್ಯನಿಗೆ, ಯಾವನು ಭಯಂಕರ ಸೆರೆಕುಡುಕನೋ, ಯಾವನಲ್ಲಿ ಏನೂ ಆಸ್ತಿಯು ಇರುವ ದಿಲ್ಲವೋ ಆತನಿಗೆ ಹಣಕೊಡುವರಾರು? ಈ ಅಡಚಣಿಯು ಪ್ರಸಂಗದಲ್ಲಿ ಒಬ್ಬ

ಸಾವುಕಾರನೂ ಆತನಿಗೆ ಸಿಗಲಿಲ್ಲ. ಹೆಂಡತಿಯ ಮೈಮೇಲಿನ ಯಾವುದೊಂದು ವಸ್ತುವನ್ನು ಅಡವು ಇಟ್ಟು ಸಾಲತೆಗೆಯೋಣವೆಂದು ಆತನು ಮನಸ್ಸು ಮಾಡಿದ್ದರೂ ಆ ದಾಗೀನೆಯನ್ನು ಕೇಳಿದರೆ ಹೆಂಡತಿಯು ತನಗೆ ಕೊಟ್ಟಾಳೆಂಬ ಭರವಸೆಯು ಆತನಿಗೆ ಎಷ್ಟುಮಾತ್ರವೂ ಇರಲಿಲ್ಲ. ಇಂತೀಬಗೆಯಾಗಿ ಶಂಕರಪ್ಪನು ಒಳ್ಳೇ ಪೇಚಿನಲ್ಲಿ ಸಿಕ್ಕನು. ಕಡೆಗೆ ಲಗ್ನಕ್ಕೆಮೊದಲೇ ೪ ದಿವಸ ಬೀಗರು ತಮ್ಮ ಪರಿವಾರದೊಡನೆ ಬಂದರು. ಅವರ ಭರದಾಸ್ತನ್ನು ಕಾಯುವದರಲ್ಲಿ ಸಾವಕ್ಕನು ತಲ್ಲೀನಳಾಗಿದ್ದಳು; ಆದರೆ ಅಂದಿನ ನಮ್ಮ ಶಂಕರಪ್ಪನ ಅವಸ್ಥೆಯನ್ನೇನು ವರ್ಣಿಸಬೇಕು?

ತನ್ನ ಗಂಡನ ಹೊಸ ಸಂಪಾದನೆಯು ಏನೂ ಇರದಿದ್ದರೂ ತಾನು ತವರುಮನೆಯಿಂದ ಮೊದಲು ತಂದಿದ್ದ ಹನ್ನೆರಡುನೂರು ರೂಪಾಯಿಗಳೂ, ತದನಂತರ ತಂದ ಐನೂರು ರೂಪಾಯಿಗಳೂ ಸೇರಿ ಒಟ್ಟಿಗೆ ಹದಿನೇಳುನೂರು ರೂಪಾಯಿಗಳನ್ನಂತೂ ತನ್ನ ಗಂಡನು ಇಟ್ಟಿರುವನು. ಬರೇ ಇಷ್ಟೇ ಹಣದಲ್ಲಾದರೂ ತಮ್ಮ ಬಸವ್ವನ ವಿವಾಹವು ಅಬ್ಬರದಿಂದ ಆಗಲಿಕ್ಕೆ ಅಡ್ಡಿಯಿಲ್ಲವೆಂದು ಮನೋರಾಜ್ಯದ ಮನೋಹರ ಮನೆಯನ್ನು ಕಲ್ಪಿಸಿಕೊಂಡು ಕಾರ್ಯತತ್ಪರಳಾಗಿದ್ದ ಸಾವಕ್ಕನು ಈ ವರೆಗೆ ಮುಗುಟಯ್ಯನವರ ಮುಖಾಂತರ ಎಲ್ಲ ಜಿನಸುಗಳನ್ನು ಉದ್ದರಿಯಾಗಿಯೇ ತರಿಸಿದ್ದಳು; ಆದರೆ ಮದುವೆಗೆ ಬೇಕಾಗುವ ಎಲ್ಲ ಸಾಮಾನುಗಳೂ ಉದ್ದರಿ ಸಿಗುವದು ಶಕ್ಯವಾದರೂ ಉಂಟೇ? ಅಗಸಾಲಿಗ, ಒಳಗಾರ, ಸಿಂಪಿಗ ಇವರಿಗೆ ಕೊಡತಕ್ಕದ್ದಕ್ಕೆ, ದಕ್ಷಿಣೆ-ದಾನಗಳಿಗೂ ತನ್ನ ಕೈಯಲ್ಲಿ ನೂರಿನ್ನೂರು ರೂಪಾಯಿಗಳನ್ನು ಕೊಟ್ಟು, ಏಳೆಂಟನೂರು ರೂಪಾಯಿಗಳನ್ನು ಉದ್ದರಿಸಾಮಾನಿಗಾಗಿಟ್ಟು, ಉಳಿದ ಹಣದಲ್ಲಿ ಅಳಿಯನ ಖುಷಿನೋಜಿಗಾಗಿ ಒಂದು ನೂರು ರೂಪಾಯಿ, ಬೀಗಿತ್ತಿ-ಕಳಸಗಿತ್ತಿಯರ ಮುಯ್ಯಾದೆಗಾಗಿ ಒಂದು ನೂರು ರೂಪಾಯಿ ರೋಖ ತೆಗೆದಿಡಬೇಕೆಂದು ಸಾವಕ್ಕನು ಗಂಡನಿಗೆ ಬಜಾಯಿಸಿ ಹೇಳಿದಳು ಅದನ್ನು ಕೇಳಿ ಇವತ್ತೇ ನಾನು ಇಷ್ಟು ರಕಮನ್ನು ಎಲ್ಲಿಂದ ತರಲಿ? ಎಂದು ಆತನು ಮನಸ್ಸಿನಲ್ಲಿ ಕಡುಚಿಂತೆಗೊಳಗಾದನು. ಇನ್ನು ಆವನು ಹಣಕ್ಕಾಗಿ ಕೇಳತಕ್ಕ ಸ್ಥಳವೆಂದರೆ ಅವರ ಋಣಾನುಬಂಧಿಕರಾದ ಗಿರಣಿಯ ಬಸಲಿಂಗಪ್ಪನವರೊಬ್ಬರು ಉಳಿದಿದ್ದರು. ಅವರನ್ನು ಕೇಳಿದ್ದರೆ ಅವರು ಬಹಳಿಲ್ಲ ತುಸಹಣವನ್ನಾದರೂ ಅವನಿಗೆ ಕೊಡುತ್ತಲೂ ಇದ್ದರು; ಆದರೆ ಈ ಮಧ್ಯದಲ್ಲಿ ಹೇಮಾದ್ರಿಯು ತನ್ನ ತಂಗೆಯಾದ ಚಿನ್ನವ್ವನ ಮದುವೆಯಾಗದ ಹೊರತು ತಾನು ಪುಟ್ಟವ್ವನೊಡನೆ ಮದುವೆಯಾಗುವದಿಲ್ಲೆಂದು ಕಟ್ಟುಸಿಟ್ಟಾಗಿ ಹೇಳಿದ್ದನು. ಅವನ ಆ ಅಂಬೋಣವು ಗಂಗವ್ವನಂತೆ

ಶಿವಕ್ಕ-ಬಸಲಿಂಗಪ್ಪನವರಿಗೂ ಸರಿದೋರಿತು. ಪುಟ್ಟವ್ವನು ಚೆನ್ನವ್ವನಿಗಿಂತ ಸರಾಸರಿ ಒಂದು ವರುಷಕ್ಕೆ ಚಿಕ್ಕವಳಾದ್ದರಿಂದ ಆಕೆಯ ತಂದೆತಾಯಿಗಳು ಅವಳ ಲಗ್ನದ ಬಗ್ಗೆ ಅಷ್ಟೊಂದು ಆತುರ ಪಡುವ ಕಾರಣವೂ ಇರಲಿಲ್ಲ. ಈ ಎಲ್ಲ ಅವಾಂತರದ ಮೂಲಕ ಶಂಕರಪ್ಪನು ಬಸಲಿಂಗಪ್ಪನವರಿಗೆ ಬಾಯಿಬಿಚ್ಚಿ ಸಾಲವನ್ನು ಕೇಳದಾದನು. ಆತನ ಅಂತರಂಗವೆಲ್ಲವನ್ನೂ ತಿಳಿದಿದ್ದರೂ ಈ ಹುಡುಗನಿಗೆ ಚೆನ್ನಾಗಿ ಅನುಭವ ಬರಲೆಂದು ಬಸಲಿಂಗಪ್ಪನವರೂ ಹಟಸ್ಥರಾಗಿದ್ದರು. ಈ ಪ್ರಸಂಗದಲ್ಲಿ ಹ್ಯಾಗೇ ಆಗಲಿ, ತನ್ನ ವ್ಯಸನೀ ಬಂಧುವಾದ ರಾಮಪ್ಪನನ್ನೇ ಕೇಳಬೇಕೆಂದೂ, ಆತನು ಈ ವೇಳೆಯಲ್ಲಿ ತನಗೆ ಕೆಲವು ನೂರು ರೂಪಾಯಿಗಳನ್ನಾದರೂ ಸಾಲಕೊಡಿಸಬಹುದೆಂದೂ ಊಹಿಸಿ ಶಂಕರಪ್ಪನು ಅಂದೇ ಮಧ್ಯಾಹ್ನ ಅವನ ಮನೆಗೆಹೋದನು. ತನ್ನ ಗೆಳೆಯನು ತನ್ನನ್ನು ಲಗ್ನಕ್ಕೆ ಕರೆಯಲಿಕ್ಕೇ ಬಂದನೆಂದು ತಿಳಿದು ಆತನು ಶಂಕರಪ್ಪನನ್ನು ಕಂಡಕೂಡಲೆ ಅಂತರಂಗದಲ್ಲಿ ಒಳ್ಳೇ ಹಿಗ್ಗಿದನು. ಹುಸ ಹೊತ್ತಿನ ಮೇಲೆ ಶಂಕರಪ್ಪನು ತಾನು ಬಂದ ಕಾರಣವ ಉಸರಲು, "ಹೊತ್ತು ಸಾಧಿಸಿ ನನ್ನ ಅಂತ ನೋಡುವದಕ್ಕಾಗಿಯೇ ನೀನು ನನ್ನ ಬಳಿಗೆ ಬರುತ್ತೀಯೆಂದು ತೋರುತ್ತದೆ. ಏನೋ ಗೃಹಸ್ಥಾ, ಮನೆಯಲ್ಲಿ ನಾಳೆ ಮಗಳ ಮದುವೆಯೆನ್ನುತ್ತೀ; ಬೀಗರು-ಬಿಜ್ಜರು ಸಹ ಕಲೆತಿರುವರೆನ್ನುತ್ತೀ; ಹೀಗಿದ್ದು ಲಗ್ನದ ಖರ್ಚಿನ ಹಣಕ್ಕೆ ಈ ದಿನ ಪ್ರಯತ್ನಮಾಡಬೇಕೇ? ಒಂದೆರಡು ದಿನ ಮೊದಲು ನೀನು ನನಗೇ ಕೆಲಸಹೇಳಿದ್ದರೆ ಒಂದು ಸಾವಿರವೇಕೆ, ಹತ್ತುಸಾವಿರ ರೂಪಾಯಿಗಳನ್ನು ಬರೇ ಬಾಯಿಕರಾರಿನಿಂದ ನಿನಗೆ ಕೊಡಿಸುತ್ತಿದ್ದೆನು. ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ಈ ಆಯುತ ಕಾಲಕ್ಕೆ-ಬೆಂಕಿಯು ಪ್ರಜ್ವಲಿಸಿದಾಗ ಬಾವೀ ತೆಗೆಯ ಹೋದರೆ-ಸಾಧ್ಯವಾದೀತೇ? ಆದರೂ ನೀನು ನನ್ನ ಜೀವದ ಗೆಳೆಯನಾದುದರಿಂದ ನಿನಗೊಂದು ಯುಕ್ತಿಯನ್ನು ಹೇಳುತ್ತೇನೆ. ಅದರಂತೆ ನಡಕೊಂಡುದಾದರೆ ಇನ್ನೆರಡು ತಾಸಿಗೆ ನಿನಗೆ ಕೆಲವು ನೂರುರೂಪಾಯಿಗಳನ್ನಾದರೂ ಕೊಡುವಂಥ ಒಂದು ಕುಳವನ್ನು ನಾನು ಖಂಡಿತವಾಗಿ ಹುಡುಕಿ ತೆಗೆಯುವೆನು ನೋಡು," ಎಂದು ಹೇಳಿ ರಾಮಪ್ಪನು ಶಂಕರಪ್ಪನ ಹಣದ ಪಿಪಾಸೆಯನ್ನು ಮತ್ತೂ ಹೆಚ್ಚಿಸಿದನು. "ನಿನ್ನ ಆ ಯುಕ್ತಿಯನ್ನು ಬೇಗನೆ ಹೇಳು. ನಾನು ಅದರಂತೆ ತಪ್ಪದೆ ನಡೆಯುವೆನು" ಎಂದು ಅವನಿಂದ ವಚನವನ್ನು ತಕ್ಕೊಂಡು ರಾಮಪ್ಪನು—ಗೆಳೆಯಾ, ಒಂದು ಬ್ಯಾಂಕಿನಲ್ಲಿ ಪ್ರಯತ್ನ ಮಾಡಿದರೆ ಹಣವು ಈಗಲೆ ದೊರೆಯುವ ಸಂಭವವಿದೆ; ಆದರೆ ಅದಕ್ಕಾಗಿ ಮೊದಲು ನೀನು ಹುಸ ಹಿರಣ್ಯಶ್ರಾದ್ಧವನ್ನು ಮಾಡಬೇಕಾಗುವದು. ವಿಶೇಷವಿಲ್ಲ. ಒಂದುನೂರು

ರೂಪಾಯಿ ನೀನು ಈಗ ನನಗೆ ತಂದು ಕೊಟ್ಟರೆ, ಸಂಜೆಯು ಒಳಗಾಗಿ ಒಂದು ಸಾವಿರ ರೂಪಾಯಿಯ ಸಾಲವನ್ನು ನಿನಗೆ ಕೊಡಿಸುತ್ತೇನೆ. ಆ ನೂರು ರೂಪಾಯಿಗಳನ್ನು ನಾನೇ ಎತ್ತಿಹಾಕುವೆನೆಂದು ತಿಳಿಯಬೇಡ; ಆ ಬ್ಯಾಂಕಿನ ಅಧಿದೇವತೆಯಂತಿರುವ ಹೆಡ್‌ಕ್ಲಾರ್ಕರಿಗೆ ದಕ್ಷಿಣೆ ಕೊಡಬೇಕಾಗುವದು, ಎಂಬದನ್ನು ಕೇಳಿ ಶಂಕರಪ್ಪನ ಪಿತ್ಥವು ತಲೆಗೇರಿತು. ಆತನು ಈವರೆಗೆ ಎಂದೂ ಉಚ್ಚರಿಸದಂಥ ಅವಾಚ್ಯಶಬ್ದಗಳಿಂದ ರಾಮಪ್ಪನ ಉತ್ತರಪೂಜೆಯನ್ನು ಮಾಡಿ ಅಲ್ಲಿಂದ ಬಂದ ದಾರಿಗೆ ಸುಂಕವಿಲ್ಲೆಂಬಂತೆ ಕೈ ಅಲ್ಲಾಡಿಸುತ್ತ ಮನೆಗೆ ಹೋದನು. ಈ ಪ್ರಕಾರ ಎಲ್ಲಿಯೂ ಹಣಸಿಗದ್ದರಿಂದ ಹಂಚಿನಂತೆ ಕಪ್ಪಿಟ್ಟ ಮೋರೆಯ ಶಂಕರಪ್ಪನು ಈ ಸಂಗತಿಯನ್ನು ಇಂದು ರಾತ್ರಿ ತನ್ನ ಹೆಂಡತಿಗೆ ತಿಳಿಸಿ, ಮುಂದೇನು ಆಗುವದೋ ನೋಡಬೇಕೆಂದು ವಿಚಾರ ಮಾಡಿ ಸಂಜೆಯುವರೆಗೆ ಸುಮ್ಮನಿದ್ದನು.

ರಾತ್ರಿಯಾಯಿತು. ದಿನದಂತೆ ಚಿನ್ನವ್ವನು ಊಟಕ್ಕೆ ನೀಡಿದಳು. ನಡುಮನೆಯ ಮಧ್ಯದಲ್ಲಿ ಶಂಕರಪ್ಪನೂ ಆತನ ಮಗಳಾದ ಬಸವ್ವನೂ ಕುಳಿತಿದ್ದರು; ಹಾಗು ಒತ್ತಟ್ಟಿಗಿನ ಮೂಲೆಯಲ್ಲಿ ಹೇಮಾದ್ರಿಯು ಕುಳಿತಿದ್ದನು; ಆದರೆ ಎಂದಿನಂತೆ ಇಂದು ಸಾವಕ್ಕನು ಬಾಗಿಲ ಬಳಿಯಲ್ಲಿ ನಿಂತುಕೊಂಡಿರಲಿಲ್ಲ. ಅವಳು ಇಂದು ನಾನಾ ಪ್ರಕಾರದ ವ್ಯವಸ್ಥೆ ಮಾಡಬೇಕಾದ್ದರಿಂದ ಆ ಕೆಲಸದಲ್ಲಿ ತೊಡಗಿದ್ದಳು. ಚಿಗವ್ವನು ಇರದ ಈ ಸಂಧಿಯನ್ನು ಸಾಧಿಸಿ ಚಿನ್ನವ್ವನು ಚಿಗಪ್ಪನೊಡನೆ ಏನೋ ಮಾತಾಡಬೇಕೆಂದಳು. ಆದರೂ ಅವಳಿಗೆ ಒಮ್ಮೆಲೆ ಧೈರ್ಯವಾಗಲಿಲ್ಲ. ಆದರಿಂದ ಬಾಗಿಲ ಹೊರಗೆ ಒಂದೆರಡು ಸಾರೆ ಇಣಿಕಿನೋಡಿ—ಚಿಗಪ್ಪಾ, ಈಗೆಂಟು ದಿನಗಳಿಂದ ನೀವು ಚನ್ನಾಗಿ ಉಣ್ಣುವದೇ ಇಲ್ಲವಲ್ಲ? ಹೀಗೇಕೆ? ಅಡಿಗೆಯೋ ಚೆನ್ನಾಗಿರುವದಿಲ್ಲೇನು? ಎಂದು ಚಿಗಪ್ಪನಿಗೆ ಏನನ್ನೋ ನೀಡುವಾಗ ಚಿನ್ನವ್ವನು ಮೆಲ್ಲಗೆ ಕೇಳಿದಳು. ಶಂಕರಪ್ಪನು ಈಗೆಂಟು ದಿನಗಳಿಂದ ಹುಚ್ಚುಹಿಡಿದವರ ಹಾಗೆ ಸದಾ ಚಿಂತಾಕ್ರಾಂತನಾಗಿರುತ್ತಿದ್ದನು ಆದರಿಂದ ಅವನಿಗೆ ಮೊದಲಿನಂತೆ ಊಟವು ಸೇರುತ್ತಿರಲಿಲ್ಲ. ದಿನಾಲು ನೀಡುವ ಚಿನ್ನವ್ವನಿಗೆ ಇದು ಕೂಡಲೆ ಹೊಳೆದಿತ್ತು. ಆದರೆ ಚಿಗಪ್ಪನನ್ನು ಕೇಳುವ ಧೈರ್ಯವೂ ಸಂಧಿಯೂ ಅವಳಿಗೆ ಈವರೆಗೆ ಸಾಧಿಸಿದ್ದಿಲ್ಲ.

"ಭಲೆ! ಭಲೆ!! ನೀನೊಳ್ಳೇ ಅಡಿಗೆ ಮಾಡುವವಳಲ್ಲವೆ? ಬೆಂಕೀಹಚ್ಚಲಿ ನಿನ್ನ ಮುಸುಡಿಗೆ" ಎಂದು ಚಿನ್ನವ್ವನನ್ನು ಕುರಿತು ಶಂಕರಪ್ಪನ ಬಳಿಯಲ್ಲಿ ಕುಳಿತಿದ್ದ ಆತನ ಮಗಳಾದ ಬಸವ್ವನು ಆತನು ಮಾತಾಡುವ ಮೊದಲೇ ನುಡಿದಳು.

"ಅದನ್ನು ಕೇಳಿ ರಂಗಿಗೆದ್ದ ಶಂಕರಪ್ಪನು ಮಗಳಿಗೆ—"ಮಾನಗೇಡಿ ಕ—ೀ ಸುಮ್ಮನಿರು. ಹೀಗೆನ್ನಲಿಕ್ಕೆ ನಿನಗೆ ಸ್ವಲ್ಪಾದರೂ ನಾಚಿಕೆ ಬರುವದಿಲ್ಲವೇ?"

ತನ್ನ ತಂದೆಯ ಬಾಯಿಂದ ಹೊರಟ ಈ ನಭೂತಪೂರ್ಣ ವಾಣಿಯನ್ನು ಕೇಳಿ ಬಸವ್ವನಂಥ ಅಜ್ಞದ ಕೂಸಿಗೆ ಒಳ್ಳೇ ಆಶ್ಚರ್ಯವೆನಿಸಿತು. ಯಾಕಂದರೆ ಈ ವರೆಗೆ ಆತನು ತನ್ನ ಮಗಳಿಗೆ ಎಂದೂ ಸಿಟ್ಟು ಸಹ ಮಾಡಿರಲಿಲ್ಲ. ಇಷ್ಟೇ ಅಲ್ಲ, ತನ್ನ ಮಗಳಿಗೆ ಉತ್ತೇಜನ ಕೊಡುವದಕ್ಕಾಗಿ ಆತನು ಎಷ್ಟೋ ಸಾರೆ ಸುಮ್ಮಸುಮ್ಮನೆ ಚಿನ್ನವ್ವನಿಗೆ ಬೈದಿದ್ದನು. ಇಷ್ಟು ಅಜ್ಞದಿಂದ ಬೆಳಿಸಿದ ತನ್ನ ಮಗಳಿಗೆ ಇಂದು ಆತನು ಆಕಸ್ಮಿಕವಾಗಿ ಇಂಥ ಕಠೋರ ಶಬ್ದದಿಂದ ಬೈದದ್ದರಿಂದ ಅವಳು ಹೌಹಾರಿದ್ದಳು. ತನ್ನ ಮಗಳು ಎಷ್ಟು ಯೋಗ್ಯತೆಯುವಳಿರುವಳೆಂಬ ದನ್ನು ಶಂಕರಪ್ಪನು ಅರಿತಿದ್ದಿಲ್ಲೆಂತಲ್ಲ; ಆದರೆ ತನ್ನ ಹೆಂಡತಿಗಾಗಿ-ಆಕೆಯ ಮುರುವತ್ತಿಗಾಗಿ-ಅವನು ಮಗಳನ್ನು ಇಷ್ಟು ತಲೆಗೇರಿಸಿಕೊಂಡಿದ್ದನು.

"ಏನಂದಿ ತಂಗೀ, ಚಿನ್ನವ್ವಾ?" ಎಂದು ಶಂಕರಪ್ಪನು ಚಿನ್ನವ್ವನ ಕಡೆಗೆ ನೋಡುತ್ತಿರುವಿ—"ನಿನ್ನ ಅಡಿಗೆ ಹೇಗಾಗಿದೆಯೆಂಬುವಿಯಾ?ತಂಗೀ, ನೀನಿರುವೆಯೆಂದು ದಿನಾಲು ನನಗೆ ಎರಡು ಹೊತ್ತಿನ ಊಟವಾದರೂ ದೊರೆಯುತ್ತದೆ." ಎಂದನು.

ಚಿನ್ನ—ಚಿಗಪ್ಪಾ, ಈಚೆಗೆ ನೀವು ಚೆನ್ನಾಗಿ ಊಟವನ್ನೇಕೆ ಮಾಡುವದಿಲ್ಲ?

ಶಂಕರಪ್ಪನು ಇನ್ನು ಚಿನ್ನವ್ವನಿಗೆ ಏನೋ ಹೇಳತಕ್ಕವನು; ಅಷ್ಟರಲ್ಲಿ ಸಾವಕ್ಕನವರ ಸವಾರಿಯು ಅಲ್ಲಿಗೆ "ದೂತ್ತ"ೆಂದು ಬಂದಿತು.

ಆಕೆಯು ಗಂಡನನ್ನು ಕುರಿತು ಒದರುತ್ತಲೆ—"ಕೇಳಿತೇನು? ನಾಳೆ ಬೆಳಿಗ್ಗೆ ಆ ಅರಿವೆಯ ಅಂಗಡಿಯವನೂ, ಪತ್ತಾರ ಕಾಳಪ್ಪನೂ ಬರುವರು. ಅವರಿಗೆ ಅವರವರ ಹಣವನ್ನು ಮುಟ್ಟಿಸಲಿಕ್ಕೇ ಬೇಕು. ತಾವು ಇನ್ನು ಎಷ್ಟು ದಿನಗಳನ್ನು ಈ ಸ್ತಿಮಿತಾವಸ್ಥೆಯಲ್ಲಿ ಕಳೆಯುವವರು? ನಾಳೆ ಮನೆಯಲ್ಲಿ ಚಕಪಕೆಯಾಗಬೇಕು, ನಾಡದು ಗಡಿಗೆ ನೀರ; ಆಚೇನಾಡದ. ದೇವರೂಟಮಾಡಿ ಸಜ್ಜಾಗಿದ್ದರೆ, ಮಂಗಳವಾರ ಬೆಳಗಿನ ಏಳು ಗಂಟೆಗೆ ವಿವಾಹಮಹೋತ್ಸವ ಸಾಂಗಮಾಡಲಿಕ್ಕೆ ಅನುಕೂಲವಾಗುವದು; ಆದರೆ ಇದೇನು, ತಂಗೀ ಎನಕಂದಮ್ಮಾ-ಬಸವ್ವಾ, ನೀನು ಈಗ ಅಳುವದೇಕೆ? ತಂಗೀ, ಅವ್ವಾ, ನಿನಗೆ ಆದದ್ದಾದರೂ ಏನು?" ಎಂದು ಅವಳು ಮಗಳ ಹತ್ತರ ಬರಹತ್ತಿದಳು.

ಹೆಂಡತಿಯ ಈ ನುಡಿಯನ್ನು ಕೇಳಿ ಶಂಕರಪ್ಪನು ಬಸವ್ವನ ಕಡೆಗೆ ಹೊರಳಿದನು. ತನ್ನ ತಂದೆಯು ತನಗೆ ಬೈದ್ದನು; ಇಷ್ಟೇ ಅಲ್ಲ, ತನ್ನನ್ನು ಹಳಿದು,

ಅತನು ಚಿನ್ನವ್ವನೊಡನೆ ಮೃದುವಾದ ಭಾಷಣಮಾಡಿದನೆಂಬದನ್ನು ನೋಡಿ, ಆ ಅಚ್ಚುದಕೂಸು ಸಹಿಸದೆ, ಕೆಳಗೆ ಮೋರೆಹಾಕಿಕೊಂಡು ಈವರೆಗೆ ಹೇಗಾದರೂ ಕುಳಿತಿತ್ತು; ಆದರೆ ತನ್ನ ಪ್ರೀತಿಯ ಹಡೆದವ್ವನು ಬಂದಕೂಡಲೆ ಆ ಕಂದವ್ವನು ಭೋರೆಂದು ಅಳತೊಡಗಿದಳು.

“ ಕತ್ತಿಯಹಾಗೆ ಟೊಣಪಳಾಗಿದ್ದ ನಿನಗೆ ಅಳಲಿಕ್ಕೇನಾಯಿತು?” ಎಂದು ಶಂಕರಪ್ಪನು ಕಿಡಿಗಣ್ಣಿನಿಂದ ಮಗಳ ಕಡೆಗೆ ನೋಡುತ್ತ ಮತ್ತೆ ಅಂದನು.

ಗಂಡನ ಈ ವಾಣಿಯನ್ನು ಕೇಳಿ ಸಾವಕ್ಕನು ಬೆಚ್ಚಿಬಿದ್ದಳು. ಇಂದು ಏನೋ ಮಾಟವಾಗಿದೆಯೆಂದು ಅವಳು ಒಮ್ಮೆಲೆ ಭಾವಿಸಿದಳು. ಈಗ ಗಂಡನ ಪಕ್ಷದಿಂದ ಮಾತಾಡಬೇಕೋ, ಮಗಳಪಕ್ಷದಿಂದ ಮಾತಾಡಬೇಕೋ ಎಂಬದು ಅವಳಿಗೆ ತಿಳಿಯದಾಯಿತು. ಕಡೆಗೆ ಬಸವ್ವನು ಬಿಕ್ಕಿ ಬಿಕ್ಕಿ ಅಳುವದನ್ನು ಕೇಳಿ ಅವಳು ಗಂಡನಿಗೆ—ಅವಳ ಮೇಲೆ ಇಷ್ಟು ಸಿಟ್ಟಾಗಲಿಕ್ಕೆ ಏನಾಯಿತು ನಿಮಗೆ? ಎಂದು ಆಕ್ರೋಶದನಿಯಿಂದ ನುಡಿದಳು.

ಶಂಕರಪ್ಪ—ನೀನು ನಡುವೆ ಮಾತಾಡಬೇಡ. ನಿನ್ನ ಅಚ್ಚುದಿಂದಲೇ ಈಕೆಯು ಇಷ್ಟು ಸೊಕ್ಕಿಗೆ ಬಂದಿದ್ದಾಳೆ. ಈ ಅಚ್ಚುದ ದುಷ್ಪರಿಣಾಮವು ನಿನಗೆ ಇನ್ನೆರಡು ದಿನಗಳಿಗೆ ತಿಳಿಯದೆ ಇರಲಿಕ್ಕಿಲ್ಲ.

ಸಾವಕ್ಕ—ಆದದ್ದಾದರೂ ಏನು? ಸುಮ್ಮನೆ ಇಷ್ಟೇಕೆ ಮಾತಾಡುವಿರಿ?

ಶಂಕರಪ್ಪನು ಏನೂ ಹೇಳಲಿಲ್ಲ. ಊಟಮುಗಿಸಿಕೊಂಡು ಕೈ ಬಾಯಿ ತೊಳೆಯಲಿಕ್ಕೆ ಎದ್ದು ಹೋದನು. ಆಗ ಸಾವಕ್ಕನು ಏನಾಯಿತೆಂದು ಬಸವನನ್ನು ಮತ್ತೆ ಕೇಳಿದಳು. ಬಸವ್ವನು ತಾಯಿಗೆ ನಡೆದ ಸಂಗತಿಯನ್ನು ಹೇಳದೆ ಮತ್ತೂ ಗಟ್ಟಿಯಾಗಿ ಅಳಹತ್ತಿದಳು. ಇದನ್ನು ನೋಡಿ ಚಿನ್ನವ್ವನು ಮಾತ್ರ ಬೆದರಿದಳು. ಈ ಪ್ರಕರಣವು ಕಡೆಗೆ ತನ್ನ ಮೇಲೆಯೇ ಹೊರುವದೆಂದು ಅವಳು ಮನಸ್ಸಿನಲ್ಲಿ ಯೋಚಿಸುವಷ್ಟರಲ್ಲಿ, ತಾಯಿಯು ಒತ್ತಾಯಪಡಿಸಿದರೂ ದುಃಖವು ಒತ್ತರಿಸಿದ್ದರಿಂದ ಹೇಳಲಾರದ ಬಸವ್ವನು ಚಿನ್ನವ್ವನ ಕಡೆಗೆ ಬೊಟ್ಟು ತೋರಿಸಿದಳು. ಕೂಡಲೆ ಸಾವಕ್ಕನು ಕೆಟ್ಟಗಣ್ಣಿನಿಂದ ಅವಳ ಕಡೆಗೆ ನೋಡಿದಳು. ಅಂಜುತ್ತಂಜುತ್ತ ಚಿನ್ನವ್ವನು ನಡೆದ ಸಂಗತಿಯನ್ನೆಲ್ಲ ತಿಳಿಸಿದಳು.

“ಆದರೆ ಸೆಟವೀ, ನಿನಗೆ ಈ ಇಲ್ಲದ ಉಸಾಬರಿಯು ಏತಕ್ಕೆ ಬೇಕಾಗಿತ್ತು; ಎಂದು, ಸಾವಕ್ಕನು ಆಕ್ರೋಶದಿಂದ—“ಈ ಭೋಸಡಿ ಕೇಳಿದಳಂತ, ನಿಮಗೆ

ಊಟವೇಕೆ ಹೋಗುವದಿಲ್ಲ? ಊಟ ಹೋಗುದಿರುವದಕ್ಕೆ ಅವರಿಗೇನು ಧಾಡೆ ಯಾಗಿದೆಯೋ......ಡೇ? ಚಾಡಿಗಿತ್ತಿ ಭೋಸಡೀನ್ನ ತಂದು..."

ಈ ಪ್ರಕಾರ ಅಂದು ರಾತ್ರಿ ಒಂಬತ್ತು ಗಂಟೆಗೆ ಸುರುವಾದ ಸಾವಕ್ಕನ ಬೈಗಳುಗಳು ಹತ್ತು ಹೊಡೆದರೂ ತೀರಲೊಲ್ಲವು. ಆಕೆಯ ಪ್ರತಿಯೊಂದು ಶಬ್ದವು ಅಟ್ಟದ ಮೇಲಿದ್ದ ಶಂಕರಪ್ಪನಿಗೆ ಸ್ಪಷ್ಟವಾಗಿ ಕೇಳುತ್ತಿತ್ತು. ಆದರೂ ಅವನು ಕೆಳಗಿಳಿದು ಬರಲಿಲ್ಲ. ಇಂದು ಆತನ ತಲೆತಿರುಗಿ ಹೋಗಿತ್ತು. ಯಾಕಂದರೆ ಆತನಿಗೆ ಇಂದು ಎಲ್ಲಿಯೂ ಹಣ ಸಿಗದ್ದರಿಂದ, ಇದನ್ನು ತನ್ನ ಹೆಂಡತಿಗೆ ತಿಳಿಸಿ ಯಾವ ಬಗೆಯಿಂದಾದರೂ ಹತ್ತುಹನ್ನೆರಡುನೂರು ರೂಪಾಯಿ ಬೆಲೆಯ ಆಕೆಯ ಯಾವದೊಂದು ವಸ್ತುವನ್ನು ಇಸಕೊಂಡು, ಬೆಳಗ್ಗೆ ಎದ್ದುಕೂಡಲೆ ಚನಿವಾರಗಟ್ಟಿಗೆ ಹೋಗಿ, ಮಾರಿ, ಹಣತರಬೇಕೆಂದು ಅವನು ಬೇತು ಹಾಕಿದ್ದನು; ಈಗಿನ ಈ ಪ್ರಕ ರಣದಿಂದ ಆ ಮಾರ್ಗವೂ ಬಂದಾದಂತಾಯಿತಾದ್ದರಿಂದ ಆತನಿಗೆ ಹುಚ್ಚು ಹಿಡಿದ ಹಾಗಾಯಿತು. ಇಷ್ಟು ದಿನ ಬಸವ್ವನಿಗೆ ಏನೂ ಮಾತಾಡದ ತನಗೆ ಇಂದೇ ಇಂಥ ಬುದ್ಧಿಯು ಎಲ್ಲಿಂದ ಪ್ರಾಪ್ತವಾಯಿತೆಂದು ಆತನಿಗೆ ಒಮ್ಮೊಮ್ಮೆ ಹಳ ಹಳಿಯೂ ಆಗುತ್ತಿತ್ತು. ಇವೆಲ್ಲ ಇಂದಿನ ಅನರ್ಥಕ್ಕೆ ಈಶ್ವರೀಸಂಕೇತವೇ ಕಾರಣವೆಂದು ಆತನು ಕಡೆಗೆ ನಿರ್ಧರಿಸಿಕೊಂಡನು.

ಬಹಳ ರಾತ್ರಿಯಾಯಿತು. ಅಂದು ಸಾವಕ್ಕನು ಅಟ್ಟದ ಮೇಲೆ ಮಲಗಲಿಕ್ಕೆ ಹೋಗಲೇ ಇಲ್ಲ; ಆದರಿಂದ ಅಂದು ಬೆಳತನಕ ಶಂಕರಪ್ಪನಿಗೆ ಏಕಾಂತವು ಲಭಿಸಿತು. ಆತನ ತಲೆಯೊಳಗಿನ ವಿಚಾರಯಂತ್ರಕ್ಕೆ ಯಾವ ಪ್ರಕಾರದ ಆಂತಕವೂ ಉಂಟಾ ಗದೆ ಅದು ಏಕೋ ಪ್ರಕಾರವಾಗಿ ತನ್ನ ಕೆಲಸವನ್ನು ಮಾಡುತ್ತಿತ್ತು. ಕಟ್ಟಕಡೆಗೆ ಬೆಳಗಿನ ಝಾವಕ್ಕೆ ದುಡ್ಡು ಗಳಿಸುವ ಒಂದು ಹೊಸಯುಕ್ತಿಯನ್ನು ಆ ಅಖಂಡ ವಿಚಾರವು ಪ್ರಸವಿಸಿತು! ಆ ಯುಕ್ತಿಯು ಸರಿಯಾದದ್ದೋ ಹೇಗೆಂಬ ಬಗ್ಗೆ ಆಲೋ ಚಿಸುವದರಲ್ಲಿ ಆತನು ಮಿಕ್ಕ ರಾತ್ರಿಯನ್ನು ಕಳೆದನು. "ಆಗುವದು, ಹೀಗೆ ಮಾಡಿ ದರೇ ತಾನು ಈ ಪೇಚಿನಿಂದ ಪಾರಾದೇನು; ಇಲ್ಲವಿದ್ದರೆ ಇಲ್ಲ" ಎಂದು ಅಸ್ಪಷ್ಟ ವಾಗಿ ನುಡಿಯುತ್ತ ಶಂಕರಪ್ಪನು ಹಾಸಿಗೆಯಿಂದ ಎದ್ದೇಳುವಷ್ಟರಲ್ಲಿ ಹೊರಗೆ ಬೆಳ್ಳಗೆ ಬೆಳಗಾಗಿತ್ತು.



## [೮]

...

ಬೀಗರು ಬಂದು ಒಂದೆರಡು ದಿನಗಳಾದವು. ಆದರೂ ಅವರು ಯಾರು, ಅವರ ಸ್ವಭಾವಧರ್ಮಗಳೇನು? ಮುಂತಾದವನ್ನು ನಮ್ಮ ವಾಚಕರು ಇನ್ನೂ ಅರಿತಿರುವದಿಲ್ಲ. ಅದಕ್ಕಾಗಿ ವಾಚಕರೇ, ನಾವಿನ್ನು ಆ ನಮ್ಮ ವೇಣಾಪುರದ ಶೆಟ್ಟರ ಮನೆಯಕಡೆಗಷ್ಟು ಹೋಗೋಣ ನಡೆಯಿರಿ.

ಶೀಲವಂತ ಶೆಟ್ಟರ ಸಂಗಪ್ಪನವರು-ನಮ್ಮ ಸಾವಕ್ಕನ ಮಗಳಾದ ಬಸವ್ವನ ಮುಂದಾಗುವ ಮಾವನು-ಶ್ರೀಮಂತರಿದ್ದು, ಅವರ ಹೊಲ ಮನೆಗಳು ವೇಣಾಪುರದ ಸಮೀಪದ ಹಳ್ಳಿಗಳಲ್ಲಿ ಹೆಚ್ಚಾಗಿದ್ದವು ಹೊರತು ಅವರ ಬಡ್ಡೀವ್ಯವಹಾರವೂ 'ಲ' ಕಾರಕ್ಕೆ ಕಡಿಮೆಯಿರಲಿಲ್ಲ. ಸಂಗಪ್ಪನಿಗೆ ಸಿದ್ದಪ್ಪನೆಂಬುವನೊಬ್ಬ ಅಣ್ಣನಿದ್ದನು. ಅವನು ಹುಟ್ಟಾ ಅಶಕ್ತಪ್ರಕೃತಿಯುವನಾದ್ದರಿಂದ ಸಂಸಾರದ ಯಾವ ಕೆಲಸದಲ್ಲಿಯೂ ಅವನು ಮನಸು ಹಾಕುತ್ತಿರಲಿಲ್ಲ. ಆದರಿಂದ ಚಿಕ್ಕಂದಿನಿಂದಲೇ ಸಂಸಾರದ ಭಾರವು ಸಂಗಪ್ಪನ ಮೇಲೆಯೇ ಬಿದ್ದಿತ್ತು. ಆದರೂ ಆತನು ಅಣ್ಣನ ಸಮ್ಮತಿ ಪಡಕೊಳ್ಳದೆ, ಯಾವ ವಿಶೇಷ ಕೆಲಸಗಳನ್ನೂ ಮಾಡುತ್ತಿರಲಿಲ್ಲ. ಸಿದ್ದಪ್ಪನವರು ಪ್ರಪಂಚದ ಯಾವ ಉಸಾಬರಿಯನ್ನು ಮಾಡದಿದ್ದರೂ, ಅವರ ಧರ್ಮಪತ್ನಿಯಾದ ಯಾದವ್ವನು ತನ್ನ ಅತ್ತೆಯು ತರುವಾಯ ಮನೆತನದ ಎಲ್ಲ ಕೆಲಸಗಳನ್ನು ಒಳ್ಳೇ ದಕ್ಷತೆಯಿಂದ ನೀಗಿಸುತ್ತಿದ್ದಳು. ಯಾದವ್ವನಿಗೆ ಮೂವರು ಹೆಣ್ಣುಮಕ್ಕಳಿದ್ದರು. ಅವರೆಲ್ಲರನ್ನೂ ಶ್ರೀಮಂತ ಹಾಗು ಸುಶೀಲ ಮನೆತನಗಳಿಗೆ ಕೊಟ್ಟು ಲಗ್ನ ಮಾಡಿದ್ದರು. ಸಂಗಪ್ಪನವರಿಗೆ ಚನ್ನಬಸವನೆಂಬೊಬ್ಬನೇ ಮಗನಿದ್ದನು. ಅವನು ಪ್ರಿವ್ಹಿಯಸ್ ಪಾಸಾಗಿದ್ದು, ಈಗ ಶೇತಕೀ ಕಾಲೇಜದಲ್ಲಿ ಕಲಿಯುತ್ತಿದ್ದನು. ಅವರ ಹೊಲ-ಗದ್ದೆಗಳು ವಿಶೇಷವಾಗಿದ್ದುದರಿಂದ ಮಗನು ವಕೀಲ ಇಲ್ಲವೆ ಡಾಕ್ಟರನಾಗಿ ದುಡ್ಡು ಸಂಪಾದಿಸುವದಕ್ಕಿಂತ ಒಕ್ಕಲತನದ ಜ್ಞಾನವನ್ನೇ ಚೆನ್ನಾಗಿ ಸಂಪಾದಿಸಿದರೆ ಹೆಚ್ಚು ಪ್ರಯೋಜನವಾದೀತೆಂದು ಬಗೆದು, ಸಂಗಪ್ಪನು ಆತನನ್ನು ಶೇತಕೀ ಕಾಲೇಜಿಗೆ ಕಳಿಸಿದ್ದನು. ಸಂಗಪ್ಪನ ಹೆಂಡತಿಯಾದ ಮುರಿಗೆವ್ವನು ದೊಡ್ಡ ಮನಸ್ಸಿನ ಹೆಣ್ಣುಮಗಳಾಗಿದ್ದಳು. ಹೀಗೆ ಸಂಗಪ್ಪನವರ ಈ ನಿಯಮಿತ ಸಂಖ್ಯೆಯುಳ್ಳ ಕುಟುಂಬದವರು ತಮ್ಮ ಸಮಾಜದ ಆಪ್ತರೊಡನೆ

ಕೂಡಿಕೊಂಡು ಚನ್ನಬಸವನ ಲಗ್ನಕ್ಕೆಂದು ಸಾವಕ್ಕನ ಮನೆಯು ಹತ್ತಿರದ ಮನೆಯಲ್ಲಿ ಬಂದಿಳಿದಿದ್ದರು.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಸಾವಕ್ಕನಿಂದ ಒಯ್ದ ಜಾತಕಗಳಲ್ಲಿ ದೈವಜ್ಞ-ಮುಗುಟಯ್ಯನವರು ಒಂದು ಜಾತಕವನ್ನು ಸಂಗಪ್ಪನವರ ಕೈಯಲ್ಲಿ ಕೊಟ್ಟು, ಇದು ನಿಮ್ಮ ಮಗನಾದ ಚನ್ನಪ್ಪನ ಜಾತಕದೊಡನೆ ಚನ್ನಾಗಿ ಕೂಡುತ್ತಿರುವದರಿಂದ ನೀವು ಈ ಜಾತಕದ ಹುಡುಗಿಯೊಡನೆಯೇ ನಿಮ್ಮ ಮಗನ ವಿವಾಹ ಮಾಡುವದು ಪ್ರಶಸ್ತವಾದದ್ದೆಂದು ತಿಳಿಸಿದರು. ತಮ್ಮ ಮನೆಯಲ್ಲಿ ಒಬ್ಬಳೇ ಸೊಸೆಯು ಬರಬೇಕಾದುದರಿಂದಲೂ, ಅದರಲ್ಲಿಯೂ ಆ ಮನೆಯ ಹಿರಿಯಳಾದ ಯಾದವ್ವನು ಒಳ್ಳೇ ಸಂಶಯಸ್ವಭಾವದವಳಾದ್ದರಿಂದಲೂ ಅವರು ಆ ಜಾತಕವನ್ನು ತಮ್ಮ ಪ್ರಾಂತದೊಳಗಿನ ಪ್ರಸಿದ್ಧ ಜ್ಯೋತಿಷ್ಕರಿಗೆಲ್ಲ ತೋರಿಸಿದ್ದು, ಅವರೆಲ್ಲರೂ ಆ ಜಾತಕಗಳು ಬಹು ಚನ್ನಾಗಿ ಕೂಡುತ್ತವೆಂದು ಅಭಿಪ್ರಾಯಪಟ್ಟದ್ದರಿಂದ, ತಮ್ಮ ಮನೆಗೆ ಬರುವ ಇಷ್ಟು ಗುಣಪೂರ್ಣ ಸೊಸೆಯನ್ನು ಗೃಹಲಕ್ಷ್ಮಿಯೆಂದೇ ಅವರು ಭಾವಿಸಿಕೊಂಡರು.

ಬೀಗರು ಇಳಕೊಂಡಿದ್ದ ಮನೆಯು ಹಿತ್ತಲು ಶಂಕರಪ್ಪನ ಮನೆಯ ಹಿತ್ತಲಿಗೆ ಹೊಂದಿತ್ತು. ಆದರಿಂದ ಪರಸ್ಪರರ ಮನೆಯೊಳಗೆ ನಡೆದ ಸಂಗತಿಗಳೆಲ್ಲ ಪರಸ್ಪರರಿಗೆ ಸಹಜವಾಗಿ ಗೊತ್ತಾಗುತ್ತಿದ್ದವು. ಒಂದು ದಿನ ಮಧ್ಯಾಹ್ನ ಯಾದವ್ವನು ನಡುಮನೆಯಲ್ಲಿ ಕುಳಿತು ಏನೋ ಕೆಲಸ ಮಾಡುತ್ತಿದ್ದಳು. ಅವಳ ಮೂವರು ಜನ ಹೆಣ್ಣುಮಕ್ಕಳು ಅವಳ ಬಳಿಯಲ್ಲಿಯೇ ಕುಳಿತಿದ್ದರು. ಸಮೀಪದಲ್ಲಿಯೇ ಅವರ ಚಿಗವ್ವನು-ಮುರಿಗೆವ್ವನು ಅಕ್ಕಿ-ಬೇಳೆ ಹಸಮಾಡುತ್ತಿದ್ದಳು. ಆಗ ಅವರಲ್ಲಿ ಇನ್ನೆರಡು ದಿನಗಳಿಗಾಗುವ ಚನ್ನಬಸವನ ಲಗ್ನದ ಮಾತುಗಳು ಹೊರಟಿದ್ದವು. ಅವರ ಭಾಷಣದಲ್ಲಿ ನಮ್ಮ ವಾಚಕರ ಪೂರ್ಣ ಸಹಾನುಭೂತಿಯನ್ನು ಪಡೆದಂಥ ಒಂದು ವ್ಯಕ್ತಿಯ ಮಾತು ನಡೆದಿತ್ತಾದ್ದರಿಂದ ಅದನ್ನು ಇಲ್ಲಿ ತಿಳಿಸುವೆವು.

" ಅವ್ವಾ, ಮೊನ್ನೆ ನೀನು ಕೇಳುತ್ತಿದ್ದೆಯಲ್ಲ, ಅವಳು ನಮ್ಮ ಅತ್ತಿಗೆಯ ದೊಡ್ಡಪ್ಪನ ಮಗಳು " ಎಂದು ಯಾದವ್ವನ ಹಿರಿಯಮಗಳು ಅಂದಳು.

" ಅವಳೇ ನಮ್ಮ ಚನ್ನಬಸಪ್ಪಣ್ಣನ ಹೆಂಡತಿಯೆಂದು ನಾನು ಮೊದಲು ತಿಳಿದಿದ್ದೆ " ಎಂದು ಎರಡನೇ ಮಗಳೆಂದಳು.

" ಅವ್ವಾ, ಮೊನ್ನೆ ಒಂದು ತಮಾಸೆಯಾಯಿತು ನೋಡು " ಎಂದಂದು ಕಿರಿಯಮಗಳು—ಅಂದು ನೀನು ನನಗೆ ಅವರಿಂದ ಕೆಲವು ಪಾತ್ರೆಗಳನ್ನು ಇಸ

ಕೊಂಡು ಬರಲಿಕ್ಕೆ ಹೇಳಿದ್ದೆಯಷ್ಟೇ; ಆಗ ನಾನು ಅವರಲ್ಲಿಗೆ ಹೋಗಿ ಅವಳಿಗೆ "ಏಸರಿ ಅತ್ತಿಗಿ, ಏಸರಿ ಅತ್ತಿಗಿ" ಎಂದು ಕರೆದೆನು. ಅದನ್ನು ಕೇಳಿ ಅವಳು ಬಹು ಗೊಂದಲದಲ್ಲಿ ಬಿದ್ದಳು. ಇಷ್ಟರಲ್ಲಿ ನಮ್ಮ ಚನ್ನಬಸವಣ್ಣನ ನಿಜವಾದ ಹೆಂಡತಿಯು ಅಲ್ಲಿಗೆ ಬಂದಳು. ಅವಳ ಕಡೆಗೆ ಬೊಟ್ಟು ತೋರಿಸಿ ಆಕೆಯು— "ಇಗೋ, ಇವಳು ನಿಮ್ಮ ಅತ್ತಿಗೆಯು" ಎಂದು ಹೇಳಲು, ನಮ್ಮ ಅತ್ತಿಗೆಯು ಒಳ್ಳೇ ಜರಬಿನಿಂದ—ಏನ ಚಿನ್ನೀ, ಅವಳಿಗೇನು ಬೇಕಾಗಿದೆಯಂತೆ? ಎಂದಳು.

ಯಾದವ್ವನ ಎರಡನೇಮಗಳು—ತಂಗೀ, ಅತ್ತಿಗೆಯು ನಿನಗೆ ಹಾಗಂದಳೇನು?

ಕಿರಿಯಮಗಳು—ಅಕ್ಕಾ, ಅವಳು ಹಾಗಂದದ್ದಕ್ಕಾಗಿ ಆಗ ನನಗೆ ಬಹಳ ಹಳಹಳಿಯಾಯಿತು.

ಯಾದವ್ವ—ಇಂದು ನಾನು ಅತ್ತ ಹೋಗಿರಲು, ಆ ಹುಡುಗೆಯು-ನಿಮ್ಮ ಅತ್ತಿಗೆಯು ದೊಡ್ಡವ್ವನ ಮಗಳಾದ ಚನ್ನವ್ವನು-ಬಾವಿಯ ಕಟ್ಟೆಯ ಮೇಲಿದ್ದಳು. ನಾನು ಅವಳ ಹತ್ತರ ಹೋಗಿ ನಿಲ್ಲಲು, ಅವಳು ಅಂಜಿದ ಚಿಗರೆಯಂತೆ ಕಾಣಿಸಿದಳು. ನಾನು ಅವಳಿಗೆ ಎಷ್ಟೋ ಪ್ರಶ್ನೆಗಳನ್ನು ಮಾಡಿದೆನು; ಆದರೆ ಅತ್ತಕಡೆಗೆ ಅವಳ ಲಕ್ಷ್ಯವೇ ಇರಲಿಲ್ಲ. ಅವಳು ಆಗಾಗ್ಗೆ ತಮ್ಮ ಹಿತ್ತಲಬಾಗಿಲಕಡೆಗೆ ಹೊರಳಿ ಹೊರಳಿ ನೋಡುತ್ತಿದ್ದಳು. ಕಟ್ಟಕಡೆಗೆ ಅಂಜುತ್ತಂಜುತ್ತ ಅವಳು— ನೀವು ನನ್ನ ಬಳಿಯಲ್ಲಿ ನಿಂತುಕೊಂಡಿರುವದನ್ನು ನಮ್ಮ ಚಿಗವ್ವನು ನೋಡಿಗೀಡ್ಯಾಳ; ಆಕೆಯ ಅದೊಂದೇ ವಾಕ್ಯವನ್ನು ಕೇಳಿ ನನಗೆ ಎಷ್ಟೋ ಸಂಶಯ ವುಂಟಾಯಿತು. ಆ ಹುಡುಗೆಗೆ ಚಿಗವ್ವನ ಕಾಟವು ಬಹಳವಿರುವಂತೆ ಕಾಣುತ್ತದೆ. ಮಧ್ಯಾಹ್ನ ನಮ್ಮಲ್ಲಿಗೆ ಬಾ, ಎಂದು ನಾನು ಅವಳಿಗೆ ಹೇಳಿದೆನು; ಆದರೆ ಆಕೆಯು ಏನೇನೋ ನೆವಹೇಳಿ ಬರುವದಾಗುವದಿಲ್ಲೆಂದು ವಿನಯದಿಂದ ತಿಳಿಸಿದಳು

"ಆದರೆ ಅವ್ವಾ, ಆ ಚನ್ನವ್ವನ ತಾಯಿಯ ಸ್ಥಿತಿಯನ್ನು ನೋಡಿರುವೆಯೇನು? ಪಾಪ! ಆಕೆಯ ಶೋಚನೀಯ ಸ್ಥಿತಿಯನ್ನು ನೋಡಲಾಗಲೊಲ್ಲ!!" ಎಂದು ಯಾದವ್ವನ ಹಿರಿಯ ಮಗಳೆಂದಳು.

"ಯಾದವ್ವಕ್ಕಾ, ಬರುತ್ತೀರೇನು; ನಾವು ಆ ಗಂಗಮ್ಮನವಗೆ ಭೆಟ್ಟಿಯಾಗಿ ಬರೋಣ" ಎಂದು ಮುರಿಗೆವ್ವನು ತನ್ನ ಕೈಯೊಳಗಿನ ಕೆಲಸ ತೀರಿಸಿ ಯಾದವ್ವನ ಬಳಿಗೆ ಬಂದು ನಿಂತು ಅಂದಳು.

"ನಡಿಯೋ ಅವ್ವಾ, ಕುಸ ಹೊತ್ತು ಹೋಗಿ ಬರೋಣ" ಎಂದು ನಡುವಿನ ಮಗಳೂ ಒತ್ತಾಯದಿಂದ ತಾಯಿಯನ್ನು ಕರೆಯಹತ್ತಿದಳು.

ಕೈಯೊಳಗಿನ ಕೆಲಸ ತೀರಿದ ತರುವಾಯ ಯಾದವ್ವನು ತನ್ನ ನೆಘೆಣ್ಣೊ ಹಾಗು ಮಕ್ಕಳೊಡನೆ ಬೀಗಿತ್ತಿಯ ಮನೆಗೆ ಹೋಗಲುದ್ಯುಕ್ತಳಾದಳು. ಆಗ "ಅವ್ವಾ, ನನಗೊಂದು ಮಾತಿನ ನೆನಪಾಗಿದೆ, ಹೇಳೆಂದರೆ, ನಾನು ನಿನಗದನ್ನು ಹೇಳುತ್ತೇನೆ" ಎಂದು ಕಿರಿಯ ಮಗಳು ನುಡಿಯಲು, ಯಾದವ್ವನು ಅದಕ್ಕೆ ಒಪ್ಪಿದಳು. ಕೂಡಲೆ ಆ ವಿನೋದೀ ಸ್ವಭಾವದ ಕಡೆಹುಟ್ಟಿನ ಮಗಳು ಲಗುಬಗನೆ ಪಡಸಾಲೆಗೆ ಹೋಗಿ, ಅಲ್ಲಿಯ ಕಿಟಕಿಯಲ್ಲಿ ಏನನ್ನೋ ಓದುತ್ತ ಕುಳಿತಿದ್ದ ಚನ್ನಬಸವಣ್ಣನಿಗೆ—ಅಣ್ಣಾ, ನಮ್ಮೊಡನೆ ಬರುತ್ತೀಯೇನು? ಎಂದು ಕೇಳಿದಳು.

"ಅದೇಕೆ?" ಎಂದು ಅವನು ಕಿಟಕಿಯೊಳಗೆ ನೋಡುವದನ್ನು ಬಿಟ್ಟು ಅವಳಕಡೆಗೆ ಮೋರೆ ತಿರುವಿ ಪ್ರಶ್ನೆ ಮಾಡಿದನು.

"ಅಣ್ಣಾ, ಕಿಟಕಿಯೊಳಗಿಂದ ಹಿತ್ತಲವೊಳಗಿನ ಆದಾರನ್ನು ನೀನು ಇಷ್ಟು ದಿಟ್ಟಿಸಿ ನೋಡುತ್ತಿರುವೆ?" ಎಂದು ಯಾದವ್ವನ ಆ ಕಿರಿಯ ಮಗಳು ಆ ಕಿಟಕಿಯ ಬಳಿಗೆ ಹೋಗಿ ಕೇಳಿದಳು; ಹಾಗು ತಾನೇ ಪುನಃ—ಅಣ್ಣಾ, ತಿಳಿಯಿತು—ತಿಳಿಯಿತು. ಹೆಂಡತಿಯನ್ನು ನೋಡುತ್ತೀಯಲ್ಲವೆ? ಆದರೆ ಅಣ್ಣಾ, ಎಚ್ಚರಿಕೆ, ಅವಳು ನಿನ್ನ ಹೆಂಡತಿಯಲ್ಲ. ನಿನ್ನ ಹೆಂಡತಿಯು ದೊಡ್ಡಪ್ಪನ ಮಗಳಾದ ಚಿನ್ನವ್ವನು" ಎಂದಳು.

ಅದೇಕಾಲಕ್ಕೆ ಹಿತ್ತಲದೊಳಗಿನ ಬಾವಿಯ ಹತ್ತರ ತನ್ನ ಮನೆಯ ಅರಿವೆಗಳನ್ನು ಮಡಿಮಾಡಿ, ಚಿನ್ನವ್ವನು ಅವುಗಳನ್ನು ಒಣಗಹಾಕುತ್ತಲಿದ್ದಳು. ಬೀಗರು ಬಂದಂದಿನಿಂದ ಬಸವ್ವನು ಕ್ವಚಿತ್ತಾಗಿಯೇ ಹೊರಹೊರಡುತ್ತಿದ್ದಳು. ಯಾಕಂದರೆ ಸಾವಕ್ಕನು ಅವಳಿಗೆ ಹಾಗೆ ನಡೆಯಲಿಕ್ಕೆ ಕಟ್ಟಪ್ಪಣೆ ಮಾಡಿದ್ದಳು. ಅವಳು ಯಾವ ವ್ಯೂಹವನ್ನು ರಚಿಸಿದ್ದಳೋ, ಅದು ಸುಸೂತ್ರವಾಗಿ ಸಾಧ್ಯವಾಗುವವರೆಗೆ ಬಸವ್ವನು ವಿಶೇಷವಾಗಿ ಬೀಗರ ಕಣ್ಣಿಗೆ ಬೀಳಬಾರದೆಂದು ಅವಳಿಗನಿಸುತ್ತಿತ್ತು, ಶಂಕರಪ್ಪನವರ ಮನೆಯಲ್ಲಿ ಒಬ್ಬಳೇ ಹುಡುಗೆಯು ಇದ್ದು, ಅವಳೇ-ಚಿನ್ನವ್ವನೇ-ಮದುವೆಯ ಮೊದಲಗಿತ್ತಿಯೆಂದು ಬೀಗರ ಮನೆಯವರು ಮೊದಮೊದಲು ತಿಳಕೊಂಡಿದ್ದರು. ಅದರಿಂದ ಹಿತ್ತಲದಲ್ಲಾಗಲಿ, ಬಾವಿಯ-ಕಟ್ಟೆಯಮೇಲಾಗಲಿ ಆಗಾಗ್ಗೆ ಅಡ್ಡಾಡುವ ಆ ಚಿನ್ನವ್ವನೇ ತನ್ನ ಹೆಂಡತಿಯೆಂದು ಚನ್ನಬಸವನೂ ತಿಳಿದಿದ್ದನು; ಆದರೆ ಈಗ ತಮ್ಮ ದೊಡ್ಡಪ್ಪನ ಮಗಳ ಮಾತಿನಿಂದ ಅವನಲ್ಲಿಯ

ಆ ಭ್ರಮವು ಬೈಲಾಯಿತು. ನಿಶ್ಚಯದ ಕಾಲಕ್ಕೆ ಮನೆಯಲ್ಲಿಯ ಅವಾಂತರದ ಮೂಲಕ ಸಂಗಪ್ಪಶೆಟ್ಟರೊಬ್ಬರೇ ಹೋಗಿದ್ದರು. ದೈವಜ್ಞಮುಗುಟರ್ನ್ಯನವರು ಸಾರಿಸಾರಿ ಹೇಳುತ್ತಿರಲು, ಹಾಗು ಜಾತಕದ ಮೇಲಿಂದ ಹುಡುಗೆಯು ಒಳ್ಳೇ ಲಕ್ಷಣವತಿಯಾಗಿರುವಳೆಂದು ಜ್ಯೋತಿಷ್ಕರೂ ಅಭಿಪ್ರಾಯಪಡುತ್ತಿರುವಾಗ ಸಂಗಪ್ಪ ನವರಾದರೂ ತಮ್ಮ ಸೊಸೆಯನ್ನು ಅಷ್ಟು ದಿಟ್ಟಿಸಿ ನೋಡಿ ಗುತರ್-ಪರಿಚಯ ಮಾಡಿಕೊಳ್ಳುವ ಕಾರಣವು ಅವರಿಗೆ ಇರಲಿಲ್ಲ. ಮೇಲಾಗಿ ನಿಶ್ಚಯವಾದ ಎಂಟೇ ದಿನಕ್ಕೆ ವಿವಾಹದ ಮುಹೂರ್ತ. ಅಂದಮೇಲೆ ಈ ಮಧ್ಯೆ ಮನೆಯ ಹೆಣ್ಣುಮಕ್ಕಳನ್ನು ಕರೆತಂದು, ವಧುವನ್ನು ತೋರಿಸುವಷ್ಟು ಆತುರವೂ ಅವರಿಗಿರಲಿಲ್ಲ. ಅದರಿಂದ ವಸ್ತುಸ್ಥಿತಿಯು ತಾನಾಗಿ ಬೈಲಿಗೆ ಬೀಳುವವರೆಗೆ ನಿಜವಾದ ವಧುವಾರೆಂಬದು ಬೀಗರಲ್ಲಿ ಯಾರಿಗೂ ಗೊತ್ತಿರಲಿಲ್ಲ. ಇರಲಿ.

ತಂಗಿಯ ಪ್ರಶ್ನೆಗೆ ಚನ್ನಬಸವನು—"ತಂಗೀ, ನಾನು ಅತ್ತಕಡೆಗೆಲ್ಲಿ ನೋಡುತ್ತಿದ್ದೆನು!" ಎಂದು ಆಕೆಯ ಹಾವಭಾವವನ್ನು ಕಂಡು ಅಂದನು. ಇಷ್ಟರಲ್ಲಿ ಹೇಮಾದ್ರಿಯು ಅಲ್ಲಿಗೆ ಬಂದನು. ಅವನು ಇಂದಿನಿಂದ ಎಂಟು ದಿನಗಳ ರಜೆಯನ್ನು ಕೇಳಿಕೊಂಡಿದ್ದನು. ಇತ್ತೀಚೆಗೆ ಬಸಲಿಂಗಪ್ಪನವರು ಬೇನೆಯಿಂದ ತುಸ ಸುಸ್ಥರಾದ್ದರಿಂದ ಅವರ ಗಿರಣಿಯ ಎಲ್ಲ ಜವಾಬುದಾರಿಯು ಹೇಮಾದ್ರಿಯ ಮೇಲೆಯೇ ಇತ್ತು. ಹೇಮಾದ್ರಿಯು ಬಂದ ಕೂಡಲೆ ತನ್ನ ಅಣ್ಣನಿಗೆ ಮತ್ತೆ ಎಷ್ಟೋ ಚೇಷ್ಟೆ ಮಾಡಬೇಕೆಂದಿದ್ದ ಯಾದವ್ವನ ಕಿರಿಯ ಮಗಳು ಅಲ್ಲಿಂದ ಭಗ್ನಮನೋರಥಳಾಗಿ ಸುಮ್ಮನೆ ಹೊರಟು ಹೋಗಬೇಕಾಯಿತು.

ಇತ್ತ ಯಾದವ್ವನು ತನ್ನ ನೆಗೆಣ್ಣಿಯೊಡನೆ ತಮ್ಮ ಮನೆಗೆ ಬರುವಳೆಂಬದನ್ನು ತಿಳಿದಕೂಡಲೆ ಸಾವಕ್ಕನು ಒಳ್ಳೇ ಗಡಿಬಿಡಿಯಲ್ಲಿ ಬಿದ್ದಳು. "ಚಿನ್ನೀ, ನೀನು ಅದನ್ನು ಮಾಡು-ಇದನ್ನು ಮಾಡು, ಹಾಗೆ ಮಾಡಬೇಡ-ಹೀಗೆ ಮಾಡಬೇಡ" ಎಂದು ಹುಕುಮ ಮಾಡುವದರಲ್ಲಿಯೂ "ನಡುವೆ ಏನಾದರೂ ಅವರೊಡನೆ ಮಾತಾಡಿದೆಯೆಂದರೆ ಚಿನ್ನೀ, ನಿನ್ನ ಹೆಣಮುಗೀತು, ದವಡೀಹಲ್ಲು ಮುರಿದಾವು, ಬೆನ್ನಎಲುವು ಸಡಿಲಾದಾವು" ಎಂದು ಒದರುವದರಲ್ಲಿಯೂ ಸಾವಕ್ಕನು ತೊಡಗಿದ್ದಳು. ಬಸವ್ವನು ಒತ್ತಟ್ಟಿಗೆ ಸಿಂಗರಿಸಿ ಕೂರಿಸಲ್ಪಟ್ಟಿದ್ದಳು. ಹೇಳಿಕೇಳಿ ಅವಳು ಮದುಮಗಳು; ಮೇಲಾಗಿ ಆಕೆಗೆ ಕೆಲಸಮಾಡುವ ರೂಢಿಯೂ ಇರಲಿಲ್ಲ. ಅದರಿಂದ ಕೆಲಸಮಾಡದಿದ್ದರೆ ಆಕೆಗೆ ಅನ್ನುವರಾರು? ಚಿನ್ನವ್ವನಿಗೆಮಾತ್ರ ಚಿಗವ್ವನ ಹುಕುಮಿನಂತೆ ನಡೆಯುವದೇ ಸಾಕುಸಾಕಾಗಿತ್ತು. ಮನೆಯೊಳಗಿನ ನಿಶ್ಚದ

ಅಡಿಗೆ, ಊಟ, ಕಸ, ಮುಸುರೆ, ಕುಟ್ಟೋಣ-ಬೀಸೋಣ, ಒಗೆಯುವದು, ಒಣಗಿಸುವದು ಮುಂತಾದ ಎಲ್ಲ ಕೆಲಸಗಳನ್ನು ಕೀಲಿಕೊಟ್ಟ ಗಡಿಯಾರದಂತೆ ಆಕೆಯು ತಪ್ಪದೆ ಮಾಡಬೇಕಾಗುತ್ತಿತ್ತಲ್ಲದೆ, ಈಗ ಮದುವೆಯ ಹೆಚ್ಚಿನ ಕೆಲಸವನ್ನು ಬಿನ್‌ಕಕರಾರಿನಿಂದ ಮಾಡಬೇಕಾಗುತ್ತಿತ್ತು. ಇಷ್ಟು ಮಾಡಿ ತಾಯಿಯ ಶುಶ್ರೂಷೆಯನ್ನು ಆಕೆಯೇ ಮಾಡುವಳು. ಈಗ [illegible] ಯೊಬ್ಬಳೇ ಒಂದೇಸವನೆ ದುಡಿಯುತ್ತಿದ್ದಳು. ಇಂದು ಅವಳ ಚಿಗವ್ವನು ಅವಳ ಮೇಲೆ ಹೆಚ್ಚಾಗಿ ಸಿಟ್ಟಾಗಿದ್ದಳು; ಆದರೆ ಚಿನ್ನವ್ವನಿಂದ ಅಂಥ ಅಪರಾಧವಾದರೂ ಯಾವದು ಆಗಿತ್ತು? ಅವರಲ್ಲಿ ನಡೆದ ಸಂಭಾಷಣವನ್ನು ಕ್ಷಣಹೊತ್ತು ಮರೆಗೆ ನಿಂತು ಕೇಳಿಕೊಳ್ಳೋಣ, ಅಂದರೆ ಅದರ ಇತ್ಯರ್ಥವಾದೀತು.

"ಸೂಳೀಮಕ್ಕಳಿರಾ, ಪಡಿಗೆ ಒಂದಾಣೆಯಾದರೆ ಈ ಚೀಲ ಗೋದಿ, ಆ ಅರ್ಧಚೀಲ ಕಡ್ಲಿಬೇಳೆ ಇವುಗಳನ್ನು ಬೀಸುವ ಕೂಲಿಯೆಷ್ಟಾಗುವದೆಂಬದು ನಿಮಗೆ ಗೊತ್ತಿದೆಯೇನು? ಈ ಬಗ್ಗೆ ಸ್ವಲ್ಪಾದರೂ ವಿಚಾರ ಮಾಡಬೇಕು. ಈಗೆಂಟುದಿನಗಳಿಂದ ಒಂದೇಸವನೆ ಒದರಿಕೊಳ್ಳುತ್ತೇನೆ. ದಿನಾಲು ತುಸ ತುಸ ಬೀಸಿದ್ದರೆ ಇಷ್ಟರೊಳಗೆ ಎಲ್ಲವೂ ಬೀಸುವದಾಗುತ್ತಿದ್ದಿಲ್ಲವೆ?......"

"ಆದರೆ ಚಿಗವ್ವಾ ನಾನೇನು ಮಾಡಲಿ? ನನ್ನ ಎದೆಯು ನೋವಾಗಿದೆ. ನನಗೆ......" ಎಂದು ಕಕ್ಕಾವಿಕ್ಕಿಯಾಗಿ ಚಿನ್ನವ್ವನು ಮಾತಾಡಿದಳು ಮಾತ್ರ. ಕೂಡಲೆ ಒಳ್ಳೇ ಆವೇಶದಿಂದ ಸಾವಕ್ಕನು—"ಭೋಸಡೀ, ನಿನ್ನ ಎದೆಗೆ ಆದದ್ದಾದರೂ ಏನ?" ಎಂದು ಒದರಿ, ಚಿನ್ನವ್ವನನ್ನು ನೆಲಕ್ಕೆ ಕೆಡವಿ ಆಕೆಯ ಎದೆಗೆ ಜನ್ನಾಗಿ ಒದೆದಳು. ಆಗ ದೈವಜ್ಞ ಮುಗುಟಯ್ಯನು ಅಲ್ಲಿಗೆ ಬರಲು, ಆ ಕರುಣಾಜನ್ಯ ಸ್ಥಿತಿಯನ್ನು ಕಂಡು ಆತನು—"ಸಾವಕ್ಕಾ, ಚಿನ್ನವ್ವನು ಅಂಥದೇನು ಅಪರಾಧ ಮಾಡಿದಳು?" ಎಂದು ಕೇಳಿದನು.

"ಆಗುವದೇನು? ಇನ್ನೆರಡು ದಿನಕ್ಕೆ ಮದುವೆ. ಮನೆಯಲ್ಲಿ ಇನ್ನು ಯಾವದೂ ಸಜ್ಜಾಗಿಲ್ಲ. ಇತ್ತ ನೋಡಿರಿ, ಈ ಕೆಲಸಗಳೆಲ್ಲ ಹೀಗೆಯೇ ಬಿದ್ದುಕೊಂಡಿರುತ್ತವೆ. ಗಂಗವ್ವನಂತೂ ಹಾಸಿಗೆ ಬಿಟ್ಟರೆ ಎಲ್ಲಿ ಕೆಲಸ ಮಾಡಬೇಕಾಗುವದೋ ಎಂದು ಸದಾ ಸರ್ವಕಾಲ ಬಿದ್ದುಕೊಂಡಿದ್ದಾಳೆ. ಈ ಭೋಸಡಿ ಕೆಲಸ ಮಾಡಲಾರದೆ ಏನೇನೋ ನೆವ ಹೇಳುತ್ತಾಳೆ. ಅಯ್ಯನವರೇ, ಇವರೊಡನೆ ಒಟಗಟ್ಟಿ ನನ್ನ ತಲೆ ನೋಯುತ್ತಿದೆ ನೋಡಿರಿ." ಎಂದು ಸಗಣಮಾಡುತ್ತ ಸಾವಕ್ಕನು ನುಡಿದಳು.

ಚಿನ್ನವ್ವನನ್ನು ಆ ಪರಿ ಒದೆದುದನ್ನು ನೋಡಿ, ಮುಗುಟಯ್ಯನಿಗೆ ಒಳ್ಳೇ ಸಿಟ್ಟು ಬಂದಿತ್ತು. ಅದರಿಂದ ಅವನು ಸಾವಕ್ಕನಿಗೆ ಬಾಯಿಗೆ ಬಂದಹಾಗೆ ಅನ್ನ ಬೇಕೆಂದಿದ್ದನು; ಆದರೆ ತಾನು ಇವಳಿಡೆಗೆ ಈಗ ಯಾವ ಕೆಲಸಕ್ಕಾಗಿ ಬಂದಿರುವೆ ನೆಂಬದನ್ನು ತಿಳಕೊಂಡು ಆ ಧೂರ್ತ ಅಯ್ಯಪ್ಪನು ಹಾಗೆ ಮಾಡಲಿಲ್ಲ

ಬಳಿಕ ಸಾವಕ್ಕನು—ಅಯ್ಯನವರೇ, ಈಗ ನೀವು ಮತ್ಯಾವ ಕೆಲಸಕ್ಕೆ ನನ್ನೆ ಡೆಗೆ ಬಂದಿರುವಿರಿ?

"ನೀವು ಈ ಮೊದಲು ವಚನ ಕೊಟ್ಟಿದ್ದಿರಲ್ಲವೆ? ಅದಕ್ಕಾಗಿ ಬಂದಿದ್ದೆನು."

"ಅದಕ್ಕಾಗಿ ಇಷ್ಟು ಅವಸರವೇಕೆ? ಇನ್ನೂ ಅವಕಾಶವದೆ."

"ಇನ್ನು ಅವಕಾಶವೇತರದು? ವಚನವಿತ್ತಂತೆ ನೀವು ನನಗೆ ಕೊಡತಕ್ಕ ಹಣವನ್ನು ಇಂದು ಕೊಟ್ಟುಬಿಡಿರಿ. ಅವಕಾಶವಿದೆ-ಅವಕಾಶವಿದೆಯೆಂದು ಕಾರ್ಯ ಸಾಂಗವಾದಮೇಲೆ ಈ ಬಡ ಅಯ್ಯಪ್ಪನ ನೆನಪುಕೂಡ ನಿಮಗಾಗಲಿಕ್ಕಿಲ್ಲ."

"ಭಲೆ! ನನ್ನಿಂದ ಹೀಗೆಂದಾದರೂ ಆದೀತೇ ಅಯ್ಯನವರೇ?"

"ಸಾವಕ್ಕಾ, ನಿನ್ನಿಂದ ಇದರಂತೆ ಇನ್ನೂ ಆಗಿರುವದಿಲ್ಲ; ಆದರೆ ತೀವ್ರವೇ ಆದೀತು."

ಮುಗುಟಯ್ಯನವರ ಮಾತಿನ ಒಲವು ಹಾಗು ಹಾವಭಾವಗಳನ್ನು ನೋಡು ತ್ತಿರಲಿಕ್ಕೆ ಇಂದು ಇವರು ಸಾಮೋಪಚಾರಗಳಿಂದ ಹೊರಟುಹೋಗಲಾರರೆಂದು ತಿಳಿದು ಸಾವಕ್ಕನು ಒಳಿಯಲ್ಲಿ ನಿಂತಿದ್ದ ಬಸವ್ವ ಹಾಗು ಚಿನ್ನವ್ವ ಇವರಿಗೆ ಬೇರೆ ಕಡೆಗೆ ಹೋಗಲಿಕ್ಕೆ ಸನ್ನೆಮಾಡಿದಳು. ಕೂಡಲೆ ಅಪ್ಪಿತಪ್ಪಿ ತೆರೆದಿದ್ದ ಪಂಜರದ ಬಾಗಿಲದೊಳಗಿಂದ ಹೊಸದಾಗಿ ಸಾಕಿದ ಪಕ್ಷಿಗಳು ಹೇಗೆ ಒಮ್ಮೆಲೆ ಹೊರಟುಹೋಗಿ ಒಡೆಯನ ಕಣ್ಣುತಪ್ಪಿಸಿಕೊಳ್ಳುವವೋ, ಹಾಗೆ ಚಿನ್ನವ್ವನ ಸ್ಥಿತಿಯಾಯಿತು; ಆದರೆ ಬಸವ್ವನು ಮಾತ್ರ ಹಾಗೆ ಮಾಡಲಿಲ್ಲ. ಚಿನ್ನವ್ವನು ಹೊರಗೆ ಬಂದು ನೆಟ್ಟಗೆ ತನ್ನ ತಾಯಿಯ ಕೋಣೆಯ ಕಡೆಗೆ ನಡೆದಳು. ಕೋಣೆಯ ಬಾಗಿಲಲ್ಲಿ ಬಂದು ಒಳಗೆ ಹಣಿಕಿ ನೋಡಿದವಳೇ ಅವಳು ನಿಂತಲ್ಲಿ ಗಕ್ಕನೆ ನಿಂತುಬಿಟ್ಟಳು. ಯಾಕಂದರೆ ತನ್ನ ತಾಯಿಯ ಮಂಚಕಹೊರಸಿನ ಸುತ್ತಮುತ್ತು ಬಹಳ ಜನ ಹೆಂಗಸರು ನೆರೆದಿದ್ದರು. ಹಿಂದೆ ಹೇಳಿದಂತೆ ಯಾದವ್ವನು ತನ್ನ ನೆಫೆಣ್ಣು ಹಾಗು ಮಕ್ಕಳೊಡನೆ ಆಗ ಗಂಗ ವ್ವನ ಸಮಾಚಾರಕ್ಕೆ ಬಂದಿದ್ದಳು. ಯಾದವ್ವನು ತನ್ನ ಜನರೊಡನೆ ಇತ್ತ ತಲೆಬಾಗಿ ಲಿಗೆ ಬರಲಿಕ್ಕೂ ಅತ್ತ ಬೀಸುವದರಸಲುವಾಗಿ ಸಾವಕ್ಕನು ಚಿನ್ನವ್ವನನ್ನು ಗಟ್ಟಿಗಟ್ಟಿ ಯಾಗಿ ಬೈಯುತ್ತ ಒದೆಯಹತ್ತಲಿಕ್ಕೂ ಗಂಟೇಬಿದ್ದಿತು. ಆ ಆವೇಶದಲ್ಲಿ ಸಾವಕ್ಕನ

ದೃಷ್ಟಿಯು ಇವರ ಮೇಲೆ ಬೀಳಲಿಲ್ಲ. ಇಂಥ ಹೊತ್ತಿನಲ್ಲಿ ತಮ್ಮ ಬೀಗಿತ್ತಿಯು ಮುಂದೆ ಹೋಗಿ ನಿಲ್ಲುವದು ಇವರಿಗೂ ಲಾಂಛನಾಸ್ಪದವೆನಿಸಿತು. ಅದರಿಂದ ಅವರು ಬೇಕಂತ ಸಾವಕ್ಕನ ಕಣ್ಣುತಪ್ಪಿಸಿ, ಗಂಗವ್ವನ ಕೋಣೆಗೆ ಹೋಗಿ ಅಲ್ಲಿಯೇ ಮಾತಾಡುತ್ತ ಕುಳಿತರು.

ತುಸ ಹೊತ್ತಿನಲ್ಲಿ ಧಡ್-ಧಡ್-ಧಡ್ ಎಂದು ಕಾಲುಸಪ್ಪಳ ಮಾಡುತ್ತ ಬಸವ್ವನು ಗಂಗವ್ವನ ಕೋಣೆಯ ಬಳಿಗೆ ಬಂದಳು; ಹಾಗು ಕುಳಿತ ಜನರನ್ನು ನೋಡಿ, ಅದೇ ಕಾಲಿಲೆ ತಿರುಗಿ ಹೋಗಿ ತಮ್ಮವ್ವನ ಕಿವಿಯಲ್ಲಿ ಆ ಸುದ್ದೀ ಹೇಳಿದಳು. ಆಗ ಸಾವಕ್ಕನು ಕಕ್ಕಾವಿಕ್ಕಿಯಾಗಿ ದೈವಜ್ಞ ಮುಗುಟಯ್ಯನವರಿಗೆ—"ಸ್ವಾಮಿಾ ಅಯ್ಯನವರೇ, ಈಗ ದಯಮಾಡಿಸಿರಿ; ಅತ್ತ ನಮ್ಮ ಬೀಗಿತ್ತಿಯರು ಬಂದಿರುತ್ತಾರೆ................." ಎಂದು ಮೆಲ್ಲಗೆ ಹೇಳುವಷ್ಟರಲ್ಲಿ,

ಮುಗುಟಯ್ಯನು—"ನಾನು ಈಗ ಹಾಗೇ ಹೋಗತಕ್ಕವನಲ್ಲ. ವಚನ ಕೊಟ್ಟಂತೆ ಕೊಡತಕ್ಕ ಹಣವನ್ನು ನನಗೆ ಕೊಡು; ಅಂದರೆ ನಾನು ಇಲ್ಲಿ ಒಂದು ಕ್ಷಣ ಸಹ ನಿಲ್ಲಲಾರೆನು"

"ಅಹುದು. ನಿಮಗೆ ವಚನ ಕೊಟ್ಟ ಪ್ರಕಾರ ಮುಟ್ಟಿಸುವೆನು; ಆದರೆ ಇನ್ನೆರಡು ದಿನಗಳಿಗೆ ಕೊಟ್ಟರೆ ಕೆಟ್ಟೀತೇನು!"

"ಕೆಡಲಿಕ್ಕೆಹತ್ತಿದರೆ ಒಂದು ಗಳಿಗೆ ಸಹ ಬೇಕಾಗಲಿಕ್ಕಿಲ್ಲ; ಅಂದಮೇಲೆ ಎರಡು ದಿನಗಳ ಅವಕಾಶವನ್ನಾದರೂ ಏತಕ್ಕೆ ಹೇಳುತ್ತೀರಿ?"

"ಅಯ್ಯನವರೇ, ನನಗೋಸುಗ ಇನ್ನೆರಡು ದಿವಸ ತಡೆಯುವಿರೋ ಇಲ್ಲವೋ!"

"ಛೇ; ಆ ಮಾತನ್ನೇ ಎತ್ತಬೇಡಿರಿ. ಒಮ್ಮೆ ನಿಮ್ಮ ಮಗಳ ಹಣೆಗೆ ದಂಡೆಕಟ್ಟಿತೆಂದರೆ ಆ ಮೇಲೆ ನಿಮಗೆ ಈ ಅಯ್ಯಪ್ಪನ ಗುರತಾದರೂ ಹತ್ತೀತೇ?" ಎಂದು ಮುಗುಟಯ್ಯನು ಒದರಿ ಒದರಿ ಮಾತಾಡಲಾರಂಭಿಸಿದನು.

"ಏನ್ರಿ ಅಯ್ಯನವರೇ, ನೀವು ಇಷ್ಟೇಕೆ ಕೂಗಿಕೊಳ್ಳುತ್ತಿರುವಿರಿ? ಅತ್ತ ನಮ್ಮ ಬೀಗಿತ್ತಿಯರು ಬಂದಿರುತ್ತಾರೆ, ಮತ್ತು ಇತ್ತ ನೀವು ಈ ಗುಪ್ತ ವಿಷಯದ ಬಗ್ಗೆ ಇಷ್ಟು ಗಟ್ಟಿಯಾಗಿ ಒದರುತ್ತೀರಿ! ಈಗ ನಿಮಗೆ ಏನೆನ್ನಬೇಕು!" ಎಂದು ಸಾವಕ್ಕನು ಮೆಲ್ಲನೆ ಅಯ್ಯಪ್ಪನಿಗೆ ಹೇಳಲು,

ಆಗ ಅಯ್ಯಪ್ಪನು ಮತ್ತೂ ಒದರುತ್ತ—ಸಾವಕ್ಕ, ನಿನಗೆ ಖಟ್ಟನಿಟ್ಟಾಗಿ ಹೇಳುತ್ತೇನೆ ಕೇಳು. ವಚನಕೊಟ್ಟ ಪ್ರಕಾರ ನೀವು ನಾಳೆ ಬೆಳಿಗ್ಗೆ ಆ ಹಣವನ್ನು ನನಗೆ

ಮುಟ್ಟಿಸದಿದ್ದರೆ, ನಾನು ಆ ಕೂಡಲೆ ನಿಮ್ಮ ಬೀಗರ ಮನೆಗೆ ಹೋಗಿ, ನಿಜವಾದ ಸಂಗತಿಯನ್ನು ಅವರಿಗೆ ತಿಳಿಸೇನು? ಆ ಮೇಲೆ ನೋಡಿಕೋ, ನಿನ್ನ ಗತಿಯು ನಿನಗಾದೀತು'' ಎಂದೆಂದು ಹೊರಟು ಹೋದನು.

ಆ ಅಯ್ಯಪ್ಪನು ಉಚ್ಚರಿಸಿದ ಪ್ರತಿಯೊಂದು ಶಬ್ದವನ್ನು ಅಲ್ಲಿಯೇ ಪಕ್ಕದ ಕೋಣೆಯಲ್ಲಿ ಕುಳಿತ ಬೀಗಿತ್ತಿಯರು ಕೇಳಿದರು. ಅವರಿಗೆ ಒಂದುಬಗೆಯ ಸಂಶಯವು ಬಂದರೂ ಅವರಾರೂ ಅದನ್ನು ಆಗ ತೋರಗೊಡಲಿಲ್ಲ.

ತುಸಹೊತ್ತಿನಲ್ಲಿ ಸಾವಕ್ಕನು ಗಂಗವ್ವನ ಕೋಣೆಗೆ ಬಂದಳು. ಅವಳು ನಗೆಮೊಗದಿಂದ ತನ್ನ ಬೀಗಿತ್ತಿಯರ ಸ್ವಾಗತ ಮಾಡಿದಳು. ಊಟವಾಯಿತೇನೆಂದು ಕೇಳಿದಳು. ಬಳಿಕ ಅಲ್ಲಿಯೇ ಬಿದ್ದುಕೊಂಡಿದ್ದ ತನ್ನ ನಘೆಣ್ಣಿಯಾದ ಗಂಗವ್ವನ ಶೋಚನೀಯ ಸ್ಥಿತಿಯ ಬಗ್ಗೆ ಬಳ್ಳೇ ವ್ಯಸನಪಡುವಂತೆ ನಟಿಸಿದಳು; ಹಾಗು ಅವರು ಹೋಗಿ ಬರುವೆವೆಂದು ಹೇಳಿ ಹೊರಡುವಾಗ ಸಾವಕ್ಕನು ಕಡತಂದ ಅನಿವಾರ ಪ್ರೇಮದಿಂದ—ತಂಗೀ, ಚಿನ್ನಕ್ಕಾ, ಈ ನಿಮ್ಮ ಅತ್ತೆಯರಿಗೆ ವೀಳ್ಯದೆಲೆ-ಅಡಿಕೆ ಕೊಡವ್ವಾ, ಎಂದು ಹೇಳಿ ಆಕೆಯಿಂದ ಅವರಿಗೆ ತಾಂಬೂಲ ಕೊಡಿಸಿದಳು; ಆದರೆ ಶೆಟ್ಟರ ಯಾದವ್ವ ಮೊದಲಾದವರಿಗೆ ಸಾವಕ್ಕನ ಈ ವರೆಗಿನ ವರ್ತನವು ಚೆನ್ನಾಗಿ ಕಣ್ಣಿಗೆ ಕಟ್ಟಿತ್ತಾದ್ದರಿಂದ ಅವಳ ಈ ಬಣ ಉಪಚಾರಕ್ಕೆ ಅವರು ಮರುಳಾಗಲಿಲ್ಲ. ಇಷ್ಟೇ ಅಲ್ಲ, ಅದರಿಂದ ಮುಗುಟಯ್ಯನವರು ಈಕೆಯ ಮಾತುಕೇಳಿ ತಮಗೇನೋ ದಗಾ ಮಾಡುವರೆಂದು ಈ ಮೊದಲು ಅವರಿಗುಂಟಾದ ಸಂಶಯವು ಮತ್ತಿಷ್ಟು ದೃಢವಾಯಿತು!



# [೯]

. . .

ಸಂಶಯ ಪಿಶಾಚಿಯು ಬಡಕೊಂಡಿತೆಂದರೆ ಅದರ ಬಾಧೆಯಿಂದ ಸಂಸಾರದಲ್ಲಿ ಎಂಥ ಎಂಥ ಅನರ್ಥಗಳು ಎಷ್ಟು ಆಗಿರುವವು; ಎಷ್ಟು ಆಗುತ್ತಿರುವವು; ಹಾಗು ಎಷ್ಟು ಆಗುವವು ಎಂಬದರ ಕಲ್ಪನೆಕೂಡ ಬಗೆಹರಿಯಲಾರದು. ಈ ಸಂಶಯ ಪಿಶಾಚಿಯ ಬಾಧೆಯಿಂದಲೇ ದೊಡ್ಡ ದೊಡ್ಡ ನಾಮಾಂಕಿತ ಸಿಂಹಾಸನಗಳೂ ಏಕಛತ್ರಪತಿ ರಾಜ್ಯಗಳೂ ರಸಾತಳಕ್ಕೆ ಹೋಗಿರುತ್ತವೆ; ನಾನು-ನಾನು ಎಂದು ಎದೆತಟ್ಟಿಕೊಳ್ಳುವ ಅತಿರಥಿ-ಮಹಾರಥಿಗಳಾದ ಕಲಿಗಳು ಮಣ್ಣು ಮುಕ್ಕಿ ಹೋಗಿರುತ್ತಾರೆ. ಹಗಲೂ-ಹನ್ನೆರಡು ತಾನು ಒಬ್ಬರೊಬ್ಬರ ಸುಖಸಂಗತಿಯಲ್ಲಿ ಮಗ್ನರಾಗಿ ಸ್ವರ್ಗಸುಖವನ್ನು ಕೂಡ ತ್ಯಾಜ್ಯವೆಂದು ತಿಳಿದಿರುವ ಎಷ್ಟೋ ಪ್ರಣಯೀ ಜತೆಗಳು ಒಬ್ಬರು ಮತ್ತೊಬ್ಬರ ಪ್ರಾಣವನ್ನು ಹೀರಲಿಕ್ಕೆ ಕೂಡ ಹಿಂದುಮುಂದು ನೋಡದಾಗುವರು. ಇಂತೀಬಗೆಯಾದ ಎಷ್ಟೋ ಅನಿಷ್ಟಪ್ರಸಂಗಗಳು ಈ ಸಂಶಯ ಪಿಶಾಚಿಯ ಬಾಧೆಯಿಂದ ಸಹಜವಾಗಿ ಆಗಿ ಹೋಗುತ್ತಿರುತ್ತವೆಂಬದು ಇತಿಹಾಸದಿಂದ ತಿಳಿದು ಬರುತ್ತದೆ.

ಇಂಥ ಈ ಭಯಂಕರ ಸಂಶಯ ಪಿಶಾಚಿಯು ನಮ್ಮ ಪ್ರಸ್ತುತದ ಕಥಾನಕದೊಳಗಿನ ವೇಣಾಪುರದ ಶೀಲವಂತ ಶೆಟ್ಟರ ಯಾದವ್ವನಿಗೆ ಬಡಕೊಂಡಿತು. ಆದರಿಂದ ಅವಳು ನಾನಾ ಪ್ರಕಾರದಿಂದ ಸಂಶಯಗ್ರಸ್ತಳಾಗಹತ್ತಿದಳು. ಸಾವಕಾಶ-ಮುಗಟ್ಯಾನವರಲ್ಲಾದ ಭಾಷಣವನ್ನು ಕುರಿತ ಅವಳು ತನ್ನಲ್ಲಿ ಎಷ್ಟು ಹೆಚ್ಚು ವಿಚಾರ ಮಾಡಲಾರಂಭಿಸಿದಳೋ, ಅಷ್ಟು ಹೆಚ್ಚು ಕುಶಂಕೆಗಳೆಂಬ ಪಿಶಾಚಿಗಳು ಅವಳಿಗೆ ಬಡಕೊಂಡು ಅವಳನ್ನು ತ್ರಸ್ತಗೊಳಿಸಹತ್ತಿದವು. ಮನೆಗೆ ಬಂದಮೇಲೆ ಅವಳು ತಮ್ಮ ಬೀಗಿತ್ತಿಯ ಮನೆಯಲ್ಲಿ ಪ್ರತ್ಯಕ್ಷ ಕಣ್ಣಿನಿಂದ ನೋಡಿದ ಹಾಗು ಕೇಳಿದ ಸಂಗತಿಗಳ ಬಗ್ಗೆ ಪುನಃ ಪುನಃ ವಿಚಾರ ಮಾಡಿದಳು. ಬಳಿಕ ತನ್ನಲ್ಲಿ ಉಂಟಾದ ಸಂಶಯಗಳನ್ನು ಅವಳು ತನ್ನ ಅತ್ಯಂತ ನಂಬಿಗೆಯ ಮಗಿಗೆವ್ವನಿಗೆ ಒತ್ತಟ್ಟಿಗೆ ಕರೆದು ತಿಳಿಸಿದಳು. ಯಾದವ್ವನು ತಿಳಿಸುವ ಮೊದಲೇ ಮುರಿಗೆವ್ವನೂ ಆ ಬಗ್ಗೆ ಆಲೋಚಿಸಿದ್ದಳು. ಹಾಗೂ ಅವಳಿಗೂ ಅದೇ ಬಗೆಯ ಸಂಶಯಗಳು ಬಾಧಿಸಹತ್ತಿದ್ದವು. ಕಟ್ಟಕಡೆಗೆ ತಮಗುಂಟಾದ ಸಂಶಯಗಳನ್ನೆಲ್ಲ ಮನೆಯೊಳಗಿನ ಗಂಡಸರಿಗೆ ತಿಳಿಸಬೇಕೆಂದು ಅವರೀರ್ವರಲ್ಲಿ ಗೊತ್ತಾಯಿತು. ಆದ

ರಂತೆ ಯಾದವ್ವನು ಆಗಲೆ ಹೋಗಿ ತನ್ನ ಗಂಡನಿಗೆ ತಿಳಿಸಿದಳು. ಸಿದ್ದಪ್ಪನವರಿಗೆ ಹೆಂಗಸರಲ್ಲುಂಟಾದ ಸಂಶಯಗಳ ಬಗ್ಗೆ ಮಹತ್ವವೆನಿಸಲಿಲ್ಲ. "ಕೆಲವು ಕೊಡ ಕೊಳ್ಳುವ ವಿಷಯವಾಗಿ ಮುಗುಟಯ್ಯನವರು ಅವಳಿಗೆ ಹಾಗೆ ಅಂದಿರಬಹುದೆ"ಂದು ಅವನು ತನ್ನ ಹೆಂಡತಿಗೆ ಹೇಳಿ ಆಕೆಯ ಸಮಾಧಾನ ಪಡಿಸಲು ಯತ್ನಿಸಿದನು; ಆದರೆ ಇಷ್ಟರಿಂದ ಯಾದವ್ವನ ಸಂಶಯನಿವಾರಣವಾಗಲಿಲ್ಲ. ಆಗ ಅವಳು ಪತಿಗೆ—"ಈ ಸಂಗತಿಯನ್ನು ನೀವು ಇಂದು ಸಂಗಪ್ಪನಿಗೆ ತಿಳಿಸಿರಿ; ಹಾಗು ಈ ಬಗ್ಗೆ ಚೆನ್ನಾಗಿ ಚೌಕಸಿ ಮಾಡಲಿಕ್ಕೆ ಹೇಳಿರಿ. ನಮಗೆ ಆ ಸಾವಕ್ಕನ ವಿಷಯವಾಗಿ ಬಹಳ ಸಂಶಯವು ಬರಹತ್ತಿದೆ. ಮೇಲಾಗಿ ಜಾತಕದ ಲಕ್ಷಣದಂತೆ ಹುಡುಗೆಯು ಎಷ್ಟು ಗುಣವತಿಯಾಗಿರಬಹುದೆಂದು ನಾವೆಲ್ಲರೂ ತರ್ಕಿಸಿದ್ದೆವೋ, ಅಷ್ಟು ಗುಣವತಿಯಾದ ವಧುವಿರುವಂತೆ ತೋರುವದಿಲ್ಲ. ಅದಕ್ಕಾಗಿ ಹೇಳುತ್ತೇನೆ, ಆ ಮಧ್ಯಸ್ತ ದೈವಜ್ಞ ಮುಗುಟಯ್ಯನವರನ್ನು ಕರೆಯಿಸಿಕೊಂಡು ಈ ಬಗ್ಗೆ ಚೆನ್ನಾಗಿ ತಪಾಸ ಮಾಡಿರಿ. ನಮ್ಮ ಮನೆಗೆ ನಾಲ್ಕಾರು ಜನ ಸೊಸೆಯರು ಬರುವಹಾಗಿದ್ದರೆ, ಅವರಲ್ಲಿ ಇವಳೊಬ್ಬಳು ಇಂಥವಳಿರಲೊಲ್ಲಳೇಕೆ ಎಂದು ಉದಾಸೀನ ಮಾಡಬಹುದಾಗಿತ್ತು; ಆದರೆ ಮನೆಗೆ ಬರಬೇಕಾಗಿರುವ ಒಬ್ಬಳೇ ಒಬ್ಬಳಾದ ಸೊಸೆಯನ್ನು ಎಲ್ಲ ರೀತಿಯಿಂದಲೂ ಚೆನ್ನಾಗಿ ಚೌಕಸಿ ಮಾಡಬೇಡವೆ?" ಎಂದು ತಿಳಿಸಿದಳು.

ಸಂಜೆಯ ಮುಂದೆ ಸಂಗಪ್ಪನು ಮನೆಗೆ ಬಂದ ಮೇಲೆ ಸಿದ್ದಪ್ಪನು ಎಲ್ಲ ಸಂಗತಿಯನ್ನು ಅವನಿಗೆ ತಿಳಿಸಿದನು. ಅದನ್ನು ಕೇಳಿ ಅವನಿಗೂ ಅನುಮಾನಬಂತು. ರಾತ್ರಿಯಲ್ಲಿ ಅವನ ಹೆಂಡತಿಯೂ ಆತನಿಗೆ ಅದನ್ನೇ ತಿಳಿಸಿದಳು. ಆದರಿಂದ ಅವನ ಮನಸ್ಸಿನ ಮೇಲೆ ಆಬಗ್ಗೆ ವಿಶೇಷ ಪರಿಣಾಮವಾಯಿತು. ಜಾತಕಗಳು ಚೆನ್ನಾಗಿ ಕೂಡಿದ್ದು, ಆ ಜಾತಕದ ವಧುವು ಒಳ್ಳೇ ಗುಣವತಿಯಾಗಿರಬೇಕೆಂದೂ ಅವಳಿಂದ ತಮ್ಮ ಮನೆತನವು ಊರ್ಜಿತಾವಸ್ಥೆಗೆ ಬರುವದೆಂದೂ ಹೇಳಿದ ಜ್ಯೋತಿಷ್ಕರ ವಚನಗಳು ಸತ್ಯವೋ, ಹೆಂಗಸರು ತೆಗೆದಿರುವ ಅನುಮಾನವು ಸತ್ಯವೋ ಎಂಬ ವಿಚಾರದಲ್ಲಿಯೇ ಸಂಗಪ್ಪನು ಆ ರಾತ್ರಿಯನ್ನು ಕಳೆದನು. ಕಡೆಗೆ ಬೆಳಗಾಗುತ್ತಲೆ ಈ ಊರಲ್ಲಿರುವ ತನ್ನ ಮಿತ್ರನಾದ ಗಿರಣಿ ಬಸಲಿಂಗಪ್ಪನನ್ನು ಈ ವಿಷಯವಾಗಿ ಕೇಳಿ ತಮ್ಮ ಸಂಶಯ ನಿವಾರಣಮಾಡಿಕೊಳ್ಳುವದನ್ನು ಅವನು ನಿಶ್ಚಯಿಸಿದನು.

ಬೆಳಗಿನ ಎಂಟು ಗಂಟೆಯಾಗಿರಬಹುದು. ವೇಣಪುರದ ಶೆಟ್ಟರ ಸಂಗಪ್ಪನವರು ಗಿರಣಿಯ ಬಸಲಿಂಗಪ್ಪನವರ ಮನೆಗೆ ಹೋದರು. ಸಂಗಪ್ಪನು ತನ್ನ ಮಗ

ನಿಗೆ ಶಂಕರಪ್ಪನ ಮಗಳಾದ ಬಸವ್ವನನ್ನು ವಧುವಾಗಿ ಗೊತ್ತು ಮಾಡಿದಂದಿನಿಂದ ಆ ಬಗ್ಗೆ ಬಸಲಿಂಗಪ್ಪನಿಗೆ ಬಳ್ಳೇ ಆಶ್ಚರ್ಯವೆನಿಸಿತ್ತು; ಮತ್ತು ಅವನು ಆ ಬಗ್ಗೆ ತನ್ನ ಹೆಂಡತಿಯಾದ ಶಿವಕ್ಕನ ಮುಂದೆ ಆಡಿ ಸಹ ತೋರಿಸಿದ್ದನು. ವಿವಾಹಕ್ಕೆಂದು ಬಂದಂದಿನಿಂದ ಸಂಗಪ್ಪನು ಬಸಲಿಂಗಪ್ಪನ ಮನೆಗೆ ಎರಡು-ಮೂರು ಸಾರೆ ಬಂದಿದ್ದನು. ಆದರೆ ಕನ್ಯೆಯ ವಿಷಯವಾಗಿ ಸಂಗಪ್ಪನು ಯಾವ ಮಾತನ್ನೂ ಆಡಿದ್ದಿಲ್ಲ. ಇಂದಾದರೂ ಸಂಗಪ್ಪನು ಹರಟೆ ಹೊಡೆಯಲಿಕ್ಕೆ ಸಹಜವಾಗಿ ಬಂದಿರಬಹುದೆಂದು ಬಸಲಿಂಗಪ್ಪನು ಮೊದಲು ತಿಳಕೊಂಡಿದ್ದನು; ಆದರೆ ಇಂದು ಸಂಗಪ್ಪನು ತನ್ನಲ್ಲಿಗೆ ಬಂದ ಕಾರಣವು ಬೇರೆಯೇ ಇರಬಹುದೆಂದು ಸ್ವಲ್ಪ ಹೊತ್ತಿನಲ್ಲಿ ಅವನಿಗೆ ಹೊಳೆಯಿತು. ಯಾಕೆಂದರೆ ತುಸ ಹೊತ್ತಿನಲ್ಲಿಯೇ ಸಂಗಪ್ಪನು ಮುಂದಾಗುವ ತನ್ನ ಸೊಸೆಯ ವಿಷಯವಾಗಿ ಹಲವು ಬಗೆಯಿಂದ ಕೇಳಹತ್ತಿದನು. ಹಾಗೆ ಆತನು ಬಸವ್ವನ ಬಗ್ಗೆ ಆಗಾಗ್ಗೆ ಕೇಳುವ ಪ್ರಶ್ನೆಗಳಿಂದ ಸಂಗಪ್ಪನಿಗೆ ಆಕೆಯ ವಿಷಯವಾಗಿ ಸಂಶಯವುಂಟಾಗಿದೆಯೆಂಬದು ಅವನಿಗೆ ನಿರ್ಧಾರವಾಯಿತು. ಆಗ ಬಸಲಿಂಗಪ್ಪನು—"ಸಂಗಪ್ಪನವರೇ, ಆ ಹುಡುಗಿಯು ಕಣ್ಣು-ಮೂಗುಗಳಿಂದ ಸಲಕ್ಷಣೆಯಾಗಿರುವಳು. ಅಶಕ್ತಳೂ ಆಗಿರುವದಿಲ್ಲ; ಆದರೆ ತುಸ ಹುಂಬಳಿರುತ್ತಾಳೆ. ಆದರೆ ಬಾಲ್ಯಕಾಲದ ಈ ಹುಂಬತನವು ದೊಡ್ಡವಳಾಗಿ ನಿಮ್ಮ ಮನೆಯಲ್ಲಿ ಬಾಳುವೆ ಮಾಡಹತ್ತಿದ ಬಳಿಕ ಉಳಿಯುವದೇ?" ಎಂದು ಹೇಳಿ ಸಂಗಪ್ಪನ ಸಮಾಧಾನ ಮಾಡಲೆಳಸಿದನು. "ಸಾವಿರ ಸುಳ್ಳು ಹೇಳಿ ಒಂದು ಕಲ್ಯಾಣ ಮಾಡಬೇಕೆ"ಂದು ನಮ್ಮ ಕನ್ನಡ ನಾಡಿನಲ್ಲಿ ಒಂದು ಅಪದ್ಧ ನಾಣ್ಣುಡಿಯು ರೂಢವಾಗಿರುವದಷ್ಟೇ? ಆ ಪ್ರಕಾರ ನಮ್ಮ ಬಸಲಿಂಗಪ್ಪನಾದರೂ ಆ ಲಗ್ನಕ್ಕೆ ಬಾಧಕವಾಗುವಂಥ ಯಾವ ಮಾತನ್ನೂ ಆಡಲಿಲ್ಲ; ಆದರೆ ಅದರಿಂದ ಸಂಗಪ್ಪನಿಗೆ ಮಾತ್ರ ಎಳ್ಳಷ್ಟೂ ಸಮಾಧಾನವೆನಿಸಲಿಲ್ಲ. ಅವರಲ್ಲುಂಟಾದ ಸಂಶಯ ನಿವಾರಣ ಮಾಡಿಕೊಳ್ಳುವ ಸಲುವಾಗಿಯೇ ಇಂದು ಅವನು ಅಲ್ಲಿಗೆ ಬಂದಿದ್ದನು.

"ಬಸಲಿಂಗಪ್ಪನವರೇ, ನೀವು ನನ್ನ ಗೆಳೆಯರಾಗಿದ್ದು ಇಂಥ ಪ್ರಸಂಗದಲ್ಲಿ ನೀವು ಹೀಗೆ ಮೈತಪ್ಪಿಸಿಕೊಂಡು ಮಾತಾಡಬೇಡಿರಿ. ನಾನು ಇಂದು ನಿಮ್ಮ ಬಳಿಗೆ ಬೇಕಂತ ಈ ಕೆಲಸಕ್ಕಾಗಿಯೇ ಬಂದಿರುತ್ತೇನೆ. ದೈವಜ್ಞ ಮುಗುಟಯ್ಯನವರು ವರ್ಣಿಸಿದಂತೆ ಆ ಹುಡುಗಿಯಲ್ಲಿ ಒಂದೂ ಗುಣವಿರುವಂತೆ ತೋರುವದಿಲ್ಲವೆಂದು ನಮ್ಮ ಹೆಣ್ಣು ಹುಡುಗಿಯರೂ ಅತ್ತಿಗೆಯವರೂ ಅನ್ನುತ್ತಾರೆ. ನೀವನ್ನುತ್ತೀರಿ, ಆ ಹುಡುಗಿಯು ತುಸ ಹುಂಬಳಿದ್ದಾಳೆಷ್ಟೇಯೆಂದು. ಹುಂಬತನವೆಂಬದು ದೊಡ್ಡ ಅವ

ಗುಣವಲ್ಲ. ದೊಡ್ಡವಳಾದ ಮೇಲೆ ಆಕೆಯಲ್ಲಿಯ ಹುಂಬತನವು ಕಡಿಮೆಯಾಗುವದೆಂಬದು ನನಗೂ ಒಪ್ಪಿತವು. ಆದರೆ ಮುಗುಟಯ್ಯನು ಸಾವಕ್ಕನಿಗೆ ನಿನ್ನೆ ಅಂದ ಕೆಲವು ಮಾತುಗಳಿಂದ ಇಲ್ಲಿ ಏನೋ ದಗಾ ಇದೆಯೆಂದು ನನಗೂ ನಮ್ಮವರಿಗೂ ಅನಿಸಹತ್ತಿದೆಯಲ್ಲ? ಆ ಬಗ್ಗೆ ನಿಮ್ಮ ಮತವೇನು?''

''ಮುಗುಟಯ್ಯನ ಅಂಥ ಯಾವ ಮಾತಿನಬಗ್ಗೆ ನಿಮಗೆ ಸಂಶಯಬಂದಿದೆ?''

'' ಗೊತ್ತಾದ ಪ್ರಕಾರ ನನ್ನ ಹಣ ನನಗೆ ನಾಳೆ ಬೆಳಗ್ಗೆ ಮುಟ್ಟಿಸಲಿಕ್ಕೆ ಬೇಕು; ಇಲ್ಲದಿದ್ದರೆ ನಾನು ಬೀಗರಮುಂದೆ ನಿಜ ಸಂಗತಿಯನ್ನು ತಿಳಿಸಿ, ನಿಮ್ಮ ಹುಳುಕನ್ನು ಹೊರಗೆಡಹೇನು; ಎಂದು ಅವನು ನಿನ್ನೆ ಸಾವಕ್ಕನಿಗೆ ಅಂದಬಗ್ಗೆ.''

ಇದನ್ನು ಕೇಳಿ ಬಸಲಿಂಗಪ್ಪನು ಕೆಲಕಾಲ ವಿಚಾರಮಗ್ನನಾದನು. ಬಸವ್ವನನ್ನು ಶೆಟ್ಟರ ಮಗನಿಗೆ ನಿಶ್ಚಯಿಸುವದರಲ್ಲಿ ಮುಗುಟಯ್ಯನ ಏನಾದರೂ ಹಿಕಮತ್ತಿರಬಹುದೆಂದು ಅವನಿಗೆ ಮೊದಲೇ ಸಂಶಯ ಬಂದಿತ್ತು. ಅವನಲ್ಲಿಯ ಆ ಸಂಶಯವು ಸಂಗಪ್ಪನು ಹೇಳಿದ ಒಂದೇ ವಾಕ್ಯದಿಂದ ದೃಢವಾಯಿತು. ಆಗ ಆತನು ಸಂಗಪ್ಪನನ್ನು ಕುರಿತು—ಸಂಗಪ್ಪನವರೇ, ಈ ವಿಷಯದಲ್ಲಿ ನಿಮಗೆ ಸಂಶಯ ಬರುತ್ತಿದ್ದರೆ, ಆ ಬಗ್ಗೆ ಸಕಾಲದಲ್ಲಿ ಯೋಗ್ಯ ವಿಚಾರಮಾಡುವದೇ ಹಿತವು. ನಮ್ಮ ಹೇಮಾದ್ರಿಯನ್ನು ಕಳಿಸಿ ನಾನು ಈಗಲೆ ಆ ಮುಗುಟಯ್ಯನನ್ನು ಕರೆಯಿಸುವೆನು. ಬಳಿಕ ನಾವು ಆತನನ್ನು ಆ ಬಗ್ಗೆ ವಿಚಾರಿಸಿ, ನಮ್ಮ ಸಂಶಯ ನಿವಾರಣಮಾಡಿಕೊಳ್ಳೋಣ, ಎಂದನು.

ಇಷ್ಟರಲ್ಲಿ ಒಳ್ಳೇ ಅವಸರದಿಂದ ಹೇಮಾದ್ರಿಯು ತಮ್ಮಕಡೆಗೇ ಬರುತ್ತಿರುವದನ್ನು ಅವರು ನೋಡಿದರು. ಬಸಲಿಂಗಪ್ಪನ ಬಳಿಯಲ್ಲಿ ಸಂಗಪ್ಪನೂ ಕುಳಿತಿರುವದನ್ನು ನೋಡಿ ಹೇಮನು ಮತ್ತೂ ಗಡಬಡಿಸಿದನು.

ಆಗ ಬಸಲಿಂಗಪ್ಪನು—''ಹೇಮಾದ್ರೀ, ಇಷ್ಟು ಅವಸರದಿಂದ ಅದೆಲ್ಲಿಗೆ ನಡೆದಿರುವೆ?'' ಎಂದು ಹೇಮನು ತನ್ನ ಹತ್ತರ ಬಂದ ಕೂಡಲೆ ಕೇಳಿದನು.

''ಎಲ್ಲಿಗೂ ಇಲ್ಲ. ಇಲ್ಲಿಗೇ ಬಂದಿದ್ದೆನು. ಅಣ್ಣಾವರೇ, ತುಸ ಒಳಗೆ ಬರುವಿರೇನು?'' ಎಂದು ಬಸಲಿಂಗಪ್ಪನನ್ನು ಕುರಿತು ಹೇಮನು ಹೇಳಿ, ಒಳಗೆ ಹೋದನು.

ಎಲೆ-ಅಡಕೆಯ ಚಂಚಿಯನ್ನು ಸಂಗಪ್ಪನವರ ಮುಂದಿಟ್ಟು ಈಗ ಬರುವೆನೆಂದು ಹೇಳಿ ಬಸಲಿಂಗಪ್ಪನು ಒಳಗೆ ಹೋದನು. ಆಗ ಅವನಿಗೆ ಹೇಮನು ಮೆಲ್ಲಗೆ—ಅಣ್ಣಾ, ಪೋಲೀಸಶಿಪಾಯಿಗಳು ಮನೆಯಬಾಗಿಲದಲ್ಲಿ ಕುಳಿತಿದ್ದಾರೆ.

ಚಿಗಪ್ಪನು ಶೇಟಜೆಸುವರ ಅಂಗಡಿಯೊಳಗಿನ ದುಡ್ಡು ಎತ್ತಿಹಾಕಿರುವನೆಂದು ಆರೋಪವಿಟ್ಟು ಅವರು ಆತನನ್ನು ಹಿಡಿದೊಯ್ಯುವ ಬೇತಿನಲ್ಲಿರುತ್ತಾರೆ'' ಎಂದು ತಡವರಿಸುತ್ತ ತಿಳಿಸಿದನು.

ಹೇಮನ ಅವಸರದ ಕಾರಣವು ತಿಳಿಯಿತು. ಇತ್ತೀಚೆಗೆ ಶಂಕರಪ್ಪನು ಕಾಳಗೆಟ್ಟಿರುವನೆಂಬದು ಬಸಲಿಂಗಪ್ಪನಿಗೆ ತಿಳಿದಿತ್ತು. ಆದರೆ ಅದರ ಪರ್ಯವಸಾನವು ಈ ಮನೆಗೆ ಮುಟ್ಟೀತೆಂಬದರ ಕಲ್ಪನೆಯುಮಾತ್ರ ಆತನಿಗಿರಲಿಲ್ಲ. ಹೇಮನು ಹೇಳಿದ ಸುದ್ದೀ ಕೇಳಿದ ಬಳಿಕ ಅವನು ಬಹಳ ಹೊತ್ತಿನ ವರೆಗೆ ಸುಮ್ಮನೆ ಕುಳಿತು ವಿಚಾರಮಾಡಿದನು. ಈಗ ನಾನು ಈ ಸಂಗತಿಯನ್ನು ಸಂಗಪ್ಪನಿಗೆ ತಿಳಿಸದಿದ್ದರೂ ತುಸ ಹೊತ್ತಿನಲ್ಲಿ ಅದು ಅವನಿಗೆ ತಿಳಿದೇ ತಿಳಿಯುವದು; ಆದರೆ ಆಗ ಅದು ಉಪ್ಪುಕಾರ ಹಚ್ಚಿಕೊಂಡು ಮಂದಿಯ ಬಾಯಿಂದ ಅವನ ಕಿವಿಗೆಬೀಳುವದಕ್ಕಿಂತ ಈಗಲೇ ನಾನು ಅವನಿಗೆ ನಿಜ ಸಂಗತಿಯನ್ನು ಸಂಕ್ಷಿಪ್ತವಾಗಿ ತಿಳಿಸಿ ಆತನ ಸಹಾನುಭೂತಿಪಡೆದರೆ, ಮುಂದಿನ ಕಾರ್ಯಗಳಿಗೆ ವಿಘ್ನ ಉಂಟಾಗಲಿಕ್ಕಿಲ್ಲೆಂದು ಭಾವಿಸಿ ಬಸಲಿಂಗಪ್ಪನು ಹೊರಗೆ ಬಂದನು; ಹಾಗು ಸಂಗಪ್ಪನವರಿಗೆ ಕೇಳಿಸುವ ಹಾಗೆ ಹೇಮಾದ್ರಿಗೆ—ಹೇಮಾದ್ರೀ, ನಡೆದ ಸಂಗತಿಯು ಖೇದಕರವಾದದ್ದೇನೋ ನಿಜ; ಆದರೆ ಅದಕ್ಕೀಗ ಉಪಾಯವಿಲ್ಲ. ಇಗೋ ಇಲ್ಲಿ ಕುಳಿತಿರುವ ನಮ್ಮ ಶೆಟ್ಟರ ಸಂಗಪ್ಪನವರಿಗೆ ನಿಮ್ಮ ಬಸವ್ವನ ವಿಷಯವಾಗಿ ಏನೋ ಸಂಶಯ ಬಂದಿದೆಯೆಂದು ತೋರುತ್ತದೆ. ಇಂಥ ಆಯತ ಸಮಯದಲ್ಲಿ ಈ ಪ್ರಕಾರವು ನಡೆದದ್ದೇನೂ ವಿಹಿತವಲ್ಲ. ಆದರೆ ಆಗಿಹೋದ ಮಾತಿಗೆ ಸುಮ್ಮನೆ ಹಳಹಳಿಸಿ ಪ್ರಯೋಜನವೇನು? ಪ್ರಸಂಗವು ವೈವೇಲೆ ಬಂದದ್ದೇನೋ ನಿಜ. ಈಗ ನೀನು ಹೋಗು; ಸಂಗಪ್ಪನವರು ಹೊರಟು ಹೋದ ಮೇಲೆ ನಿನ್ನ ಬೆನ್ನ ಹಿಂದೆಯೇ ನಾನೂ ಬರುವೆನು ನಡೆ, ಎಂದು ಕಳಿಸಿಕೊಟ್ಟನು.

ಹೇಮಾದ್ರಿಯು ಹೊರಟು ಹೋದಬಳಿಕ ಬಸಲಿಂಗಪ್ಪನು ನಡೆದ ಸಂಗತಿಯಲ್ಲಿ ಏನೂ ಮಹತ್ವವಿರದೆ, ಆದಾವಕೆಯ ಜನರು ಶಂಕರಪ್ಪನ ಮೇಲೆ ಇಂಥ ಸುಳ್ಳು ಆರೋಪ ಹೊರಿಸಿ, ಅವನ ಕೇಡುಬಗೆಯಲೆಳಿಸಿರುವರೆಂದು ಸಂಗಪ್ಪನಿಗೆ ತಿಳಿಸಿದನು ಕಡೆಗೆ ಆತನು—ಶೆಟ್ಟರೇ, ನಾನು ಈಗ ಅತ್ತಕಡೆಗೇ ಹೋಗಿ ಏನೇನು ನಡೆದಿದೆ ಎಂಬದರ ಇತ್ಯರ್ಥ ಮಾಡುವೆನು; ಹಾಗು ಮುಗುಟವ್ವನನ್ನು ಕರೆಯಿಸಿಕೊಂಡು ಇನ್ನು ತುಸ ಹೊತ್ತಿನಲ್ಲಿಯೇ ನಿಮಗೆ ಬಂದು ಭೆಟ್ಟಿಯಾಗುವೆನು'' ಎಂದು ಸಂಗಪ್ಪನಿಗೆ ಹೇಳಿ ಕಳಿಸಿದನು.

---

# [೧೦]

...

ಜಗದೀಶನು ಪ್ರತಿಯೊಂದು ವ್ಯವಹಾರಕ್ಕೂ ಮರ್ಯಾದೆಯನ್ನು ನಿರ್ಮಿಸಿರುತ್ತಾನೆ. ಯಾವುದೊಂದು ವ್ಯವಹಾರದಲ್ಲಿಯಾದರೂ ಒಮ್ಮೆ ಮರ್ಯಾದೋಲ್ಲಂಘನವಾಯಿತೆಂದರೆ ತೀರಿತು, ಆಮೇಲೆ ಆ ವ್ಯವಹಾರಕ್ಕೆ ಬೆಲೆಯೇ ಉಳಿಯುವದಿಲ್ಲ. ನಮ್ಮ ಭೋಳೇ ಶಂಕರಪ್ಪನ ಮೇಲೆ ಇಂಥ ಭಯಂಕರ ಪ್ರಸಂಗವುಂಟಾಗುವ ಕಾರಣವನ್ನು ಶೋಧಿಸ ಹೋದರೆ, ಆತನು ಮೊಟ್ಟಮೊದಲು ತನ್ನ ಶೀಲದ ಮರ್ಯಾದೋಲ್ಲಂಘನ ಮಾಡಿದ್ದರ ದುಷ್ಪರಿಣಾಮವೇ ಕಾರಣವೆಂದು ತಟ್ಟನೆ ತಿಳಿದು ಬರುವದು. ದುರ್ಮಿತ್ರರ ಸಹವಾಸದಿಂದ ತನ್ನಲ್ಲಿದ್ದಬಿದ್ದದ್ದನ್ನೆಲ್ಲ ಹಾಳು ಮಾಡಿಕೊಂಡ ನಂತರ, ಶಂಕರಪ್ಪನು ದುಡ್ಡಿಗಾಗಿ ಮೊದಲು ಎಲ್ಲ ಸಾವುಕಾರರ ಮನೆಗೆ ಎಡತಾಕಿದನು. ಯಾವ ಸಾವುಕಾರರಲ್ಲಿಯೂ ಒಂದು ಕಪರ್ದಿಕೂಡ ಸಿಗದಾಗಲು, ಅದೇ ಸಮಯಕ್ಕೆ ಮನೆಯಲ್ಲಿ ಮಗಳ ಲಗ್ನಸಮಾರಂಭವೂ ನಡೆಯಬೇಕಾಯಿತು. ಆಗ ಆತನು ಬಲು ಪೇಚಿನೊಳಗಾದನು. ಕಡೆಗೆ ಈ ಮೊದಲು ಹೇಳಿದಂತೆ ಒಂದು ಇಡಿರಾತ್ರಿ ವಿಚಾರಮಾಡಿ ಆತನು ದುಡ್ಡು ಗಳಿಸುವ ಒಂದು ಹೊಸ ಕುಯುಕ್ತಿಯನ್ನು ಹುಡುಕಿಕೊಂಡಿದ್ದನು. ಆ ಯುಕ್ತಿಯು ಯಾವುದೆಂದರೆ, ಅನ್ನದಾತೃವಾದ ಶೇಟಜಿಯ ತಿಜೋರಿಯೊಳಗಿನ ಹಣವನ್ನು ಯಾರಿಗೂ ತಿಳಿಯದ ಹಾಗೆ ಎತ್ತಿ ಹಾಕುವದಾಗಿತ್ತು. ಮನುಷ್ಯನು ವ್ಯಸನಾಧೀನತೆಯಿಂದ ಬರಬರುತ್ತ ಯಾವ ನಿಂದ್ಯಕೆಲಸಗಳಿಗೂ ಹೇಸುವದಿಲ್ಲೆಂಬದಕ್ಕೆ ಇದೊಂದು ನೆನಪಿಡತಕ್ಕ ಉದಾಹರಣೆಯಾಗಿರುತ್ತದೆ.

ಉದ್ದರಿ ದೊರೆಯದಂಥ ಚಿಲ್ಲರ ಖರ್ಚಿಗಾಗಿ ತನಗೆ ಎರಡುನೂರು ರೂಪಾಯಿಗಳು ಕೊಡಲೇ ಬೇಕೆಂದು ಸಾವಕ್ಕನು ಗಂಡನಿಗೆ ವರಾತ ಹಚ್ಚಲು, ಆತನು ಹ್ಯಾಗೆ-ಹ್ಯಾಗೋ ಮಾಡಿ ಮರುದಿನ ಸಾಯಂಕಾಲದೊಳಗೆ ತಮ್ಮ ಶೇಟಜಿಯ ಅಂಗಡಿಯೊಳಗಿನ ಎರಡುನೂರು ರೂಪಾಯಿಗಳನ್ನು ನೆಗವಿಕೊಂಡು ಬಂದನು. ಆದರೆ ಆ ಹಣವು ನೆಟ್ಟಗೆ ಬಂದು ಸಾವಕ್ಕನ ಕೈಸೇರಲಿಲ್ಲ. ಈ ಮೊದಲು ಆತನಿಗೆ ಚಿಲ್ಲರು ಸಾಲ ಕೊಟ್ಟ ಮಾರವಾಡಿಗಳಿಗೆ ಇಂದು ಶಂಕರಪ್ಪನ ಕೈಯಲ್ಲಿ ಹಣವಿರುವದೆಂದು ಹೇಗೋ ತಿಳಿಯಲು, ಅವರು ಅವನನ್ನು ದಾರಿಯಲ್ಲಿ ಅಡ್ಡಗಟ್ಟಿ ತಮ್ಮ

ತಮ್ಮ ಸಾಲ ತೀರಿಸಿಕೊಂಡರು. ಆದರಿಂದ ಆತನು ಅಂದು ತನ್ನ ಹೊಸ ಯುಕ್ತಿ ಯಿಂದ ಸಂಪಾದಿಸಿದ ಇನ್ನೂರು ರೂಪಾಯಿಗಳು ನಡುವೇ ಗಡಪ್ಪಾಗಿಬಿಟ್ಟವು. ಇದರಿಂದ ಹೊಸ ಯುಕ್ತಿಯು ಫಲಿಸಿದರೂ ಶಂಕರಪ್ಪನನ್ನು ಆವರಿಸಿದ್ದ ಚಿಂತಾ ಪ್ರಮುದೆಯು ಅಂದು ಅವನನ್ನು ಯತ್ಕಿಂಚಿತ್ತೂ ಬಿಡಲಿಲ್ಲ. ಆಗ ಅವನು ಮತ್ತೊಮ್ಮೆ ಈ ಹೊಸ ಯುಕ್ತಿಯನ್ನು ಕೈ ಹಿಡಿಯಬೇಕೆಂದು ನಿಶ್ಚಯಿಸಿದನು. ಮರುದಿನ ಅವನು ಮತ್ತೆ ಎರಡುನೂರು ರೂಪಾಯಿಗಳನ್ನು ಎತ್ತಿಹಾಕಿದನು; ಆದರೆ ಆತನ ದುರ್ದೈವದ ಮೂಲಕ ಅದೇ ಸಂಜೆಯ.ಮುಂದೆ ಒಹು ದೊಡ್ಡ ರಕಮಿನ ಒಂದು ದರ್ಶನೀ ಹುಂಡಿಯು ಶೇಟನಿಗೆ ಬಂದಿತು. ಆಗ ಶೇಟಜಿಯು ತನ್ನಲ್ಲಿಯ ಸಿಲಕನ್ನು ಎಣಿಸಹಚ್ಚಿದನು. ಒಟ್ಟಿಗೆ ನಾಲ್ಕುನೂರು ರೂಪಾಯಿಗಳು ಕಡಿಮೆ ಯಾದವೆಂದು ಆತನ ನಿದರ್ಶನಕ್ಕೆ ಬಂತು. ಆತನು ಎಷ್ಟೋಸಾರೆ ಲೆಕ್ಕ ನೋಡಿ ದನು; ಹಾಗು ಮತ್ತೆ ಮತ್ತೆ ಸಿಲಕು ಎಣಿಸಿದನು. ಎಷ್ಟಿಯೂ ಸಮಾಧಾನಕರ ವಾದ ನಿರ್ಣಯವು ಹೊರಡಲೊಲ್ಲದು. ಆದರಿಂದ ಶೇಟಜಿಯು ಗೊಂದಲದಲ್ಲಿ ಬಿದ್ದನು. ಇತ್ತೀಚೆಗೆ ಶಂಕರಪ್ಪನ ದುರ್ವರ್ತನದ ಎಷ್ಟೋ ಫಿರ್ಯಾದಿಗಳು ಆತನ ಕಿವಿಯವರೆಗೆ ಬಂದಿದ್ದವು. ಹೊರತು ಆತನು ಈಗ ದುಡ್ಡಿನ ಅಡಚಣಿ ಯಲ್ಲಿರುವನೆಂಬದೂ ಶೇಟಜಿಗೆ ಗೊತ್ತಿತ್ತು. ಇವೆಲ್ಲ ಸಂಗತಿಗಳನ್ನು ವಿಚಾರಿಸು ತ್ತಿರಲಿಕ್ಕೆ ಎಷ್ಟೋ ಹೊತ್ತಿನಮೇಲೆ ಆತನು ಶಂಕರಪ್ಪನ ವಿಷಯವಾಗಿ ಸಂಶಯ ಗ್ರಸ್ತನಾದನು. ಆಬಗ್ಗೆ ಆತನು ತನ್ನ ಮುಖ್ಯ ಕಾರಕೂನನಿಗೆ ವಿಚಾರಿಸಿದನು. ತನ್ನಲ್ಲಿಯ ಸಂಶಯಕ್ಕೆ ಪುಷ್ಟಿಯುಂಟಾಗುವಂಥ ಒಂದೆರಡು ಕ್ಷುಲ್ಲಕ ಸಂಗತಿಗಳು ಆತನಿಂದ ಶೇಟಜಿಗೆ ತಿಳಿದವು. ಮೇಲಾಗಿ ಇಂದು ಶಂಕರಪ್ಪನು ಅಂಗಡಿಯಿಂದ ಬೇಗನೆ ಹೋಗಿದ್ದನು. ಹೋಗುವಾಗ ಆತನ ಬಕ್ಕಣದೊಳಗೆ ಬಹಳ ಹಣವಿದ್ದಂತೆ ನೋಡುವವರಿಗೆ ಅವು ಒಳ್ಳೇ ಭಾರನಾಗಿ ಕಾಣಿಸುತ್ತಿದ್ದವೆಂಬ ಸಂಗತಿಯೂ ಅವ ನಿಗೆ ತಿಳಿಯಿತು. ಶೇಟಜಿಯು ಕೂಡಲೆ ತಪಾಸು ಹಚ್ಚಿದನು. ಆ ಕಾಲಕ್ಕೆ ಶಂಕರಪ್ಪನು ಒಂದು ಅರಿವೆಯ ಅಂಗಡಿಯಲ್ಲಿ ಸೀರೆ, ಕುಪ್ಪಸ ಮೊದಲಾದ ಜವಳ ಯನ್ನು ಕೊಳ್ಳುತ್ತಿದ್ದನು. ಆತನು ಅವರಲ್ಲಿ ಕೊಂಡುಕೊಂಡು ಹೋದಮೇಲೆ ಶೇಟಜಿಯ ಮುಖ್ಯ ಕಾರಕೂನನು ಅಲ್ಲಿಗೆ ಹೋಗಿ ಚೌಕಸಿ ಮಾಡಿದನು. ಮಾಲಿನ ಬೆಲೆಗಾಗಿ ಕೊಟ್ಟ ಹಣದಲ್ಲಿಯ ಕೆಲವು ನೋಟುಗಳು ತಮ್ಮಲ್ಲಿಯವೇ ಎಂಬದು ಆತನಿಗೆ ತಿಳಿಯಿತು. ಆ ಕೂಡಲೆ ಆತನು ಪೋಲೀಸರಿಗೆ ಆ ಬಗ್ಗೆ ವರ್ದಿ ಮುಟ್ಟಿಸಿದನು. ಪೋಲೀಸರಿಗೆ ಮಾಲು-ಮತ್ತೆ ಸಹಿತ ಸಿಕ್ಕ ಇಂಥ ಪ್ರಕರಣವು

ಕೈಗೆ ಬಿದ್ದ ಕೂಡಲೆ ಕೇಳುವಿರಾ! ಕೂಡಲೆ ಅವರು ಅಲ್ಲೋಲ-ಕಲ್ಲೋಲ ಮಾಡಿ ಬಿಟ್ಟರು!

ಬಸಲಿಂಗಪ್ಪನು ಶಂಕರಪ್ಪನ ಮನೆಗೆ ಬಂದಾಗ ಪೋಲೀಸರು ಆತನನ್ನು ಚಾವಡಿಗೆ ಹಿಡಿದೊಯ್ದಿದ್ದರು. ಅದರಿಂದ ಮುಂದೇನು ಮಾಡಬೇಕೆಂಬದು ಅವನಿಗೆ ತಿಳಿಯದಾಯಿತು. ಅವನು ಶಂಕರಪ್ಪನ ಮನೆಯ ಪಡಸಾಲೆಯ ಮೇಲೆ ಕೆಲ ಹೊತ್ತು ಕುಳಿತು ಆಲೋಚಿಸತೊಡಗಿದನು. ಅವನ ಬಳಿಯಲ್ಲಿ ನತಮುಖನಾದ ಹೇಮಾದ್ರಿಯೂ ನಿಂತುಕೊಂಡಿದ್ದನು. ಇಷ್ಟರಲ್ಲಿ ಒಳಗೆ ಸಾವಕ್ಕನ ಗದ್ದರಿ ಸೋಣಕ್ಕೆ ಪ್ರಾರಂಭವಾಯಿತು.

“ ಮಾಡಿದವರುಂಡಾರು ಮಹಿಯಂಥ ಕಡಬು ” ಯಾರು ಹೇಳಿದ್ದರು ಇವರಿಗೆ ಇಂಥ ಹೇಸಿ ಕೆಲಸ ಮಾಡಲಿಕ್ಕೆ? ಒರಬರುತ್ತ ಬುದ್ಧಿವಂತಿಕೆಯು ಹೆಚ್ಚಾಗಹತ್ತಿದೆ. ಕೈಯೊಳಗಿನ ಹಣವನ್ನೆಲ್ಲ ಹಾಳುಮಾಡಿ ಈಗ ಇಂಥ ಚಾಳಿಗೆ ಬಿದ್ದಿರುತ್ತಾರೆ. ಕುಣಿಯಿರಿ .............ಮಕ್ಕಳೇ ಕುಣಿಯಿರಿ. ನಾಳೆ ಬೆಳಗಾದರೆ ಮನೆಯಲ್ಲಿ ಮದುವೆ ಬಂದದ್ದರ ಬಗ್ಗೆ ಸ್ವಲ್ಪಾದರೂ ಚಿಂತೆಯಿರಬೇಕು.... ಈ ಪ್ರಸಂಗದಲ್ಲಿ ನನಗೆ ಯಾರದಾದರೂ ಸಹಾಯವಿದೆಯೇ? ಯಾರ ಮೇಲೆ ಭರವಸೆ ಇಟ್ಟು ಕೆಲಸ ಮಾಡಬೇಕು? ಅವರೇ ಇಂಥ ಚಿಂಗಿಭಿಂಗಿ ಸ್ವಭಾವದವರು. ಹೋಗವಲ್ಲರೇಕೆ! ಅವರನ್ನು ಕಟ್ಟಿಕೊಂಡು ಮಾಡುವದೇನು? ಈ ಮದುವೆಯ ಕೆಲಸ ನೀಗಿಸಿಕೊಳ್ಳಲಿಕ್ಕೆ ಈ ಖಂಬಿರ ಸಾವಕ್ಕನಿರುತ್ತಾಳೆ. ಹೇಮಾದ್ರೀ, ಹೋಗು, ಆ ಮುಗುಟಯ್ಯನನ್ನು ಕರಕೊಂಡು ಬಾ; ನಿನ್ನ ಹಣದ ಬಗ್ಗೆ ಈಗ ಸಟಗೊಂಡು ಕೂಡ್ರಬೇಡವೆಂದು ಅವನಿಗೆ ಹೇಳು. ಈ ದುಡ್ಡೇ ಎಲ್ಲ ಕೆಲಸಗಳನ್ನು ಘಾತಮಾಡುವದು. ”

ಈ ಪ್ರಕಾರ ಸಾವಕ್ಕನ ಬಾಯಿ ತೋಫಿನ ಗುಂಡುಗಳು ಮುಗಿದು ನಡುವೆ ಎಲ್ಲಿ ತುಸ ಶಾಂತವಾಗಹತ್ತಿತೆಂತ್ಲೀ ಇಲ್ಲೋ ಅಷ್ಟರಲ್ಲಿ ಮುಗುಟಯ್ಯನು ಅಂಜುತ್ತಂಜುತ್ತ ಅಲ್ಲಿಗೇ ಬಂದನು. ಅವನ ಹಿಂದಿಂದೆ ಶೇಟಜಿಯ ಅಂಗಡಿಯ ಮುಖ್ಯ ಗುಮಾಸ್ತನೂ ಬಂದನು. ಅಯ್ಯನವರು ಬಸಲಿಂಗಪ್ಪನವರಿಗೆ ಆಶೀರ್ವದಿಸಿ--ಬಸಲಿಂಗಪ್ಪಣ್ಣಾ, ಪೋಲೀಸರು ಶಂಕರಪ್ಪನನ್ನು ದಸ್ತಗೀರು ಮಾಡಿಕೊಂಡೊಯ್ದರೆಂದು ನಾನು ಕೇಳಿದ ಸುದ್ದಿಯು ನಿಜವೇನು? ಎಂದು ಪ್ರಶ್ನೆ ಮಾಡಿದನು.

“ಅಹುದು” ಎಂದು ನಡುವೇ ಬಾಯಿ ಹಾಕಿ ಶೇಟಜಿಯ ಗುಮಾಸ್ತನು— ನಿಮ್ಮ ಶಂಕರಪ್ಪನವರು ಅಂಗಡಿಯಲ್ಲಿಯ ನಾನೂರು ರೂಪಾಯಿಗಳನ್ನು ಎತ್ತಿ

ಹಾಕಿರುತ್ತಾರೆ. ಅದಕ್ಕಾಗಿ ನಮ್ಮ ಶೇಟನು ನನ್ನನ್ನು ಇಲ್ಲಿಗೆ ಕಳಿಸಿಕೊಟ್ಟಿರು ತ್ತಾನೆ. ಒಂದುವೇಳೆ ನೀವು ಆ ನಾನೂರು ರೂಪಾಯಿಗಳನ್ನು ಈಗಿಂದೀಗಲೆ ಭರಣಾ ಮಾಡಿದರೆ, ಶೇಟನು ಶಂಕರಪ್ಪನ ಮೇಲಿನ ಫಿರ್ಯಾದಿಯನ್ನು ತೆಗೆದು ಕೊಂಡು ಆತನನ್ನು ಬಂಧಮುಕ್ತ ಮಾಡಿಸುವನು.

ಇದನ್ನು ಕೇಳಿ ಮುಗುಟಯ್ಯನು ಒಳಗೆ ಹೋದನು. ಅವನು ಸಾವಕ್ಕನೊಡನೆ ತನ್ನ ಹಣದ ವಿಷಯವಾಗಿ ಮೆಲ್ಲಗೆ ನಡೆಸಿದ್ದ ಚರ್ಚೆಯು ಹೊರಗೆ ಸ್ಪಷ್ಟವಾಗಿ ಕೇಳುತ್ತಿತ್ತು. ಬಸಲಿಂಗಪ್ಪನು ಪಡಸಾಲೆಯಲ್ಲಿಯೇ ಕುಳಿತು ಒಂದು ಕಿವಿಯಿಂದ ಒಳಗೆ ನಡೆದ ಸಾವಕ್ಕನ ಭಾಷಣವನ್ನೂ ಮತ್ತೊಂದು ಕಿವಿಯಿಂದ ಶೇಟರ ಗುಮಾಸ್ತನ ಸಂಗತಿಯನ್ನೂ ಕೇಳಿಕೊಳ್ಳುತ್ತಿದ್ದನು. ತುಸ ಹೊತ್ತಿನಲ್ಲಿ ಭಗ್ನಮನೋರಥನಾದ ಮುಗುಟಯ್ಯನು ಕಾಲನ್ನಪ್ಪಳಿಸುತ್ತ ಹೊರಗೆ ಬಂದನು

“ಈಗ ನಾನು ನಡೆದೆನು ನಿಮ್ಮ ಬೀಗರ ಕಡೆಗೆ. ಇವರಿಗೆ ಚಲೋದಾಗ ಬೇಕೆಂದು ನಾವೊಂದು ಮಾಡಲಿಕ್ಕೆ ಹೋದರೆ ಅದೇ ನಮಗೆ ಮುಳುವಾಗಹತ್ತಿದೆ. ನಾವು ದೈವಜ್ಞರು ಇಂಥ ಕೆಲಸ ಮಾಡುತ್ತೇವೆಂದು ಜನರಿಗೆ ತಿಳಿದರೆ, ಅವರು ನಮ್ಮನ್ನು ತಮ್ಮ ಮನೆಯ ಮುಂದಾದರೂ ನಿಲ್ಲಗೊಡುವರೇ?......” ಹೀಗೆ ಒಟಗುಟ್ಟುತ್ತ ಅಯ್ಯಪ್ಪನೊಮ್ಮೆ ಅಲ್ಲಿಂದ ಹೊರಬಿದ್ದನು. ಆಗ ಬಸಲಿಂಗಪ್ಪನು ಆತನನ್ನು ಕರೆದು—ಅಯ್ಯನವರೇ, ತುಸ ತಡೆಯಿರಿ. ನಿಮ್ಮೊಡನೆ ಕೆಲವು ಮಹತ್ವದ ವಿಷಯವನ್ನು ಕುರಿತು ಮಾತಾಡುವದದೆ; ಎಂದಂದು, ಶೇಟಜಿಯ ಕಾರಕೂನನಿಗೆ—ನೀವೂ ತುಸವೇಳೆ ಇಲ್ಲಿಯೇ ಕುಳಿತುಕೊಳ್ಳಿರಿ. ದುಡ್ಡಿನ ವ್ಯವಸ್ಥೆಯು ಮನೆಯೊಳಗೆ ಆಗುವದೇನೆಂಬದನ್ನು ತಿಳಿದು ಬರುವೆನ ; ಎಂದು ಹೇಳಿ, ಹೇಮಾದ್ರಿಯನ್ನು ಮುಂದೆ ಹಾಕಿಕೊಂಡು ಬಸಲಿಂಗಪ್ಪನು ಶಂಕರಪ್ಪನ ಮನೆಯನ್ನು ಪ್ರವೇಶಿಸಿದನು.

ಆಗ ಚಿನ್ನವ್ವನು ಅಂಜಿಕೆಯಿಂದ ನಡಗುತ್ತ ತಾಯಿಯ ಹೊರಸಿನ ಬಳಿಯಲ್ಲಿ ನಿಂತಿದ್ದಳು. ಹೊರಗೆ ತಮಾಸೆಯೇ ನಡೆದಿದೆಯೆಂದು ತಿಳಿದು ಅದನ್ನು ನೋಡಲಿಕ್ಕೆ ನಿಂತವಳಂತೆ ಬಸವ್ವನು ಬಾಗಿಲಲ್ಲಿ ನಿಂತು ಹೊರಗೆ ನೋಡುತ್ತಿದ್ದಳು. ಬಾಯಿಂದ ಒಟಗುಟ್ಟುತ್ತ ಹಾಗು ಪಾತ್ರೆಗಳನ್ನು ಅಪ್ಪಳಿಸುತ್ತ ಸಾವಕ್ಕನು ಅಡಿಗೆಯ ಮನೆಯೊಳಗಿನ ಯಾವದೋ ಒಂದು ಕೆಲಸದಲ್ಲಿ ತೊಡಗಿದ್ದಳು. ಇಷ್ಟರಲ್ಲಿ ಹೇಮನು ಅಲ್ಲಿಗೆಹೋದನು. ಅವನನ್ನು ಕಂಡಕೂಡಲೆ ಅವಳು ಸಿಟ್ಟಿನಿಂದ “ಯಾಕೋ ಹೇಮಾ, ನೀನೇಕೆ ಸುಮ್ಮನಿರುವೆ? ನೀನೂ ನಿನ್ನ ಚಿಗಪ್ಪನ ಹಾಗೆ ಪ್ರಸಿದ್ಧಿಗೆ ಬಾ!

ನಿಮ್ಮ ಗಿರಣಿಯೊಳಗೆ ತಿಜೋರಿಗಳಿಲ್ಲೇನು......'' ಎಂದು ಮತ್ತೇ ಏನೋ ನುಡಿಯುತ್ತಿರುವಾಗ ಅವಳ ದೃಷ್ಟಿಯು ಅಲ್ಲಿಯೇ ಬಾಗಿಲ ಮರೆಗೆ ನಿಂತಿದ್ದ ಬಸಲಿಂಗಪ್ಪನ ಮೇಲೆ ಬಿದ್ದಿತು. ಆಗ ಅವಳಿಗೆ ತುಸ ಲಜ್ಜೆಯುಂಟಾಗಿ ಅವಳು ಸುಮ್ಮನಾದಳು.

ಆಗ ಬಸಲಿಂಗಪ್ಪನು ಸಾವಕ್ಕನನ್ನು ಕುರಿತು—''ಹೊರಗೆ ಶೇಟಜಿಯ ಗುಮಾಸ್ತನು ಬಂದಿರುತ್ತಾನೆ. ಸಾವಕ್ಕಾ, ಏನಾದರೂ ಮಾಡಿ ಈಗ ಅವನಿಗೆ ನಾನೂರುರೂಪಾಯಿ ಭರಣಾ ಮಾಡಿದರೆ ಶಂಕರಪ್ಪನ ಬಿಡುಗಡೆಯಾಗುವದು.'' ಎಂದನು.

''ನಾನೇನು ಪ್ರಯತ್ನ ಮಾಡುವವಳು. ನಾಳೆ-ನಾಡದು ಮನೆಯಲ್ಲಿ ಮಗಳ ಲಗ್ನ ಬಂದಿದೆ......''

ಆಕೆಯನ್ನು ಮತ್ತೆ ಮಾತಾಡಗೊಡದ ಬಸಲಿಂಗಪ್ಪನು—''ಇಂಥ ಪ್ರಸಂಗದಲ್ಲಿ ಲಗ್ನದ್ದೇನು ತಕ್ಕೊಂಡು ಮಾಡುವಿರಿ ನೀವು? ಮುಂದೆ ಲಗ್ನವಾದೀತು; ಆದರೆ ಈಗ ಇದು ಮಾನ-ಮರ್ಯಾದೆಯ ಮಾತಿರುತ್ತದೆ.'' ಎಂದು ತುಸ ಸಿಟ್ಟಿನಿಂದಲೇ ನುಡಿದನು.

''ಆದರೆ ಹೇಳಿಕೇಳಿ ನಾನು ಹೆಂಗಸು. ನಾನೇನು ಮಾಡಬೇಕು? ಮರ್ಯಾದೆಯ ಬಗ್ಗೆ ಅಷ್ಟು ಅನಿಸುತ್ತಿದ್ದರೆ, ಇಂಥ ಹೇಸಿಕೆಲಸವನ್ನೇಕೆ ಮಾಡಬೇಕು? ''

'' ಮಾಡತಕ್ಕದ್ದಿದ್ದಿಲ್ಲ; ಮಾಡಿದನು. ಈಗ ಅದರ ವಾದವೇತಕ್ಕೆ? ನಿಮ್ಮ ಹತ್ತರ ಹಣವಿದ್ದರೆ ಕೊಡಿರಿ; ಇಲ್ಲದಿದ್ದರೆ ಅಷ್ಟು ಬೆಲೆಯ ಯಾವುದೊಂದು ವಸ್ತ್ರ-ಒಡಿವೆಯನ್ನು ತೆಗೆದುಕೊಟ್ಟು ಪ್ರಸಂಗವನ್ನು ದಾಟಿಸಿರಿ; ಮತ್ತು ಹೀಗೆ ನೀವು ಏನಾದರೂ ವ್ಯವಸ್ಥೆಯನ್ನು ಈಗಲೆ ಮಾಡುವದಾದರೆ ಶೇಟಜಿಯೂ ರಾಜಿಯಾಗಿ ಫಿರ್ಯಾದಿಯನ್ನು ತೆಗೆದುಕೊಳ್ಳಲಿಕ್ಕೆ ಒಪ್ಪಿರುತ್ತಾನೆ ''

'' ಆದರೆ ರಾಜಿಗೆ ನಾನೆಲ್ಲಿ ಕಬೂಲಿದ್ದೇನೆ? ನನ್ನಲ್ಲಿ ಹಣವೂ ಇಲ್ಲ; ವಸ್ತ್ರ-ಒಡಿವೆಯೂ ಇಲ್ಲ. ''

'' ಸಾವಕ್ಕನವರೇ ತುಸ ಶಾಂತರಾಗಿ ವಿಚಾರಮಾಡಿರಿ, ಆಮೇಲೆ ಮಾಡೇವೆಂದರೆ ಕೆಲಸವಾಗಲಿಕ್ಕಿಲ್ಲ, '' ಎಂದೆಂದು ಬಸಲಿಂಗಪ್ಪನು ತುಸ ಹೊತ್ತು ಅಲ್ಲಿಯೇ ನಿಂತುಕೊಂಡನು. ಬಳಿಕ ಅವನು ಮತ್ತೆ '' ಯಾಕೆ ಸಾವಕ್ಕಾ, ಏನೆನ್ನುವಿರಿ? ನೋಡಿರಿ, ಒಮ್ಮೆ ಫಿರ್ಯಾದಿಯು ಕಚೇರಿಗೆ ಹೋಯಿತೆಂದರೆ ಆ ಮೇಲೆ ಯಾರ

ಕೈಯೊಳಗಿನ ಮಾತೂ ಉಳಿಯುವದಿಲ್ಲ.''

" ಹೋಗಲೊಲ್ಲದೇಕೆ; ಕಚೇರಿಗೆ ಹೋಗಲಿ, ಕೋರ್ಟಿಗೆ ಹೋಗಲಿ, ನಾನಾದರೂ ಏನು ಮಾಡಲಿ? '' ಎಂದು ಸಾವಕ್ಕನು ಬಸಲಿಂಗಪ್ಪನ ಮೇಲೆಯೇ ಹರಿಹಾಯ್ದು ನುಡಿಯಲು, " ಹಾಗೇ ಆಗಲಿ, ನಿಮ್ಮ ಇಷ್ಟ! '' ಎಂದೆಂದು ಅವನು ಹೊರಹೊರಟನು.

ವಾಚಕರೇ, ಸಾವಕ್ಕನ ಬಾಯಿಂದ ಹೊರಟ ಆ ಉತ್ತರವನ್ನು ಕೇಳಿ ನಿಮಗೆ ಆಶ್ಚರ್ಯವೆನಿಸಿರಬಹುದಲ್ಲವೆ? ಪೋಲೀಸರಿಂದ ದಸ್ತಗೀರ ಮಾಡಿಕೊಂಡು ಹೋಗಿರುವಂಥವನ ಹೆಂಡತಿಗೆ ತನ್ನ ಗಂಡನ ಬಗ್ಗೆ ಸ್ವಲ್ಪವೂ ಖೇದವೆನಿಸದಿರುವದು ನಿಶ್ಚಯವಾಗಿಯೇ ಆಶ್ಚರ್ಯಕರವಾದ ಸಂಗತಿಯಾಗಿರುತ್ತದೆ. ಆದರೆ ಇಂಥ ಪಾಷಾಣಹೃದಯದ ಹೆಂಗಳೆಯರು ನಮ್ಮ ಸಮಾಜದಲ್ಲಿ ಹೆಚ್ಚಾಗಿರದಿದ್ದರೂ, ಕೆಲಜನರಾದರೂ ಇರುವರೆಂಬದನ್ನು ಪ್ರತಿಯೊಂದು ಊರವರೂ ಮನಗಾಣಬಹುದು. ಸಾವಕ್ಕನಿಗೆ ಆಗ ಮಗಳ ಲಗ್ನದ ಹೊರತು ಬೇರೆ ಯಾವದೂ ಮಹತ್ವದ ಮಾತಾಗಿ ತೋರುತ್ತಿದ್ದಿಲ್ಲ. ಆಗ ಅವಳ ಮನೆಯಲ್ಲಿ ಲಗ್ನದ ಪ್ರಸಂಗವಿರದಿದ್ದರೆ ಅವಳ ಮನಸ್ಸಿನ ಮೇಲೆ ಗಂಡನಿಗೆ ಪ್ರಾಪ್ತವಾದ ಸಂಕಟದ ಪರಿಣಾಮವು ಕದಾಚಿತ್ ಆಗಬಹುದಿತ್ತು. ಆದರೆ ಇದಾದರೂ ಕೇವಲ ನಮ್ಮ ಕಲ್ಪನಾಚಿತ್ರವೇ ಆಗಿರುತ್ತದೆ. ಯಾಕಂದರೆ ಈ ವರೆಗಿನ ಅವಳ ಸ್ವಭಾವವನ್ನು ನೋಡಿದವರಿಗೆ ನಮ್ಮ ಮಾತಿನ ಬಗ್ಗೆ ಸಂದೇಹವುಂಟಾಗಲಿಕ್ಕಿಲ್ಲ. ಬಸಲಿಂಗಪ್ಪನು ಹೊರಬಿದ್ದ ಕೂಡಲೆ ಹೇಮಾದ್ರಿಯು ನಡಗುವ ದನಿಯಿಂದ ಆತನನ್ನು ಕುರಿತು—ಅಣ್ಣಾನವರೇ, ಇನ್ನು ನಮ್ಮ ಚಿಗಪ್ಪನ ಗತಿಯೇನು? ಆತನನ್ನು ಬಿಡಿಸಲಿಕ್ಕೆ ಬೇರೆ ಉಪಾಯವೇ ಇಲ್ಲವೇ? ಎಂದು ಕೇಳಿದನು.

"ಉಪಾಯವೇ, ಶೇಟಜಿಯ ದುಡ್ಡು ಭರ್ತಿ ಮಾಡುವದೊಂದೇ ಉಪಾಯವು; ಆದರೆ ಹಣವನ್ನು ತುಂಬುವವರಾರು? ನಿಮ್ಮ ಚಿಗವ್ವನಂತೂ ಮಗಳ ಮದುವೆಯ ಗೊಂದಲದಲ್ಲಿ ಗುಂಗಾಗಿಬಿಟ್ಟಿರುವಳು. ಅವಳಿಗೇ ತನ್ನ ಗಂಡನ ಬಗ್ಗೆ ಚಿಂತೆಯಿಲ್ಲದ ಬಳಿಕ ಪರಕೀಯರೇನು ಮಾಡಬೇಕು? ಆತನ ದೈವದಲ್ಲಿದ್ದದ್ದು ಆದೀತು'' ಎಂದು ಬಸಲಿಂಗಪ್ಪನು ಹೇಮನಿಗೆ ಉತ್ತರ ಕೊಟ್ಟದ್ದೇನೋ ನಿಜ; ಆದರೆ ಹೊರಗೆ ಕುಳಿತಿದ್ದ ಶೇಟಜಿಯ ಗುಮಾಸ್ತನಿಗೆ ಹಾಗೆಯೇ ಹೇಳಿ ಕಳಿಸುವದು ಆತನಿಂದಾಗಲಿಲ್ಲ. ಯಾಕಂದರೆ ತನ್ನ ಚಿಗಪ್ಪನ ವಿಷಯವಾಗಿ ಕಳಕಳಿಯಿಂದ— "ಚಿಗಪ್ಪನ ಗತಿಯೇನು?'' ಎಂದು ಕೇಳುವ ಹೇಮಾದ್ರಿಯ ಮೂರ್ತಿಯು ಅವನ

ಎದುರಿಗೇ ನಿಂತಿತ್ತು. ಕಡೆಗೆ ಬಸಲಿಂಗಪ್ಪನು ಆ ಗುಮಾಸ್ತನನ್ನು ಒತ್ತಟ್ಟಿಗೆ ಕರೆದೊಯ್ದು—"ನಾನೇ ನಿಮ್ಮ ಶೇಟಜಿಯ ರೂಪಾಯಿಗಳನ್ನು ಕೊಡುವೆನು. ಈ ಹಣವನ್ನು ಇಗೋ ಈ ಹುಡುಗನ ಸಲುವಾಗಿ ನಾನು ತುಂಬುತ್ತೇನೆ, ತಿಳಿಯಿತೇ? ಆತನ ಹೆಂಡತಿಯ ಮಾತು ಕೇಳಿದರೆ ಅವನ ಗತಿ ಅವನಿಗಾಗಲೆಂದು ಸ‍್ವಮ್ಮನೆ ಕೂಡ್ರಬೇಕಾಗುತ್ತಿತ್ತು. ಇಂದು ಸಂಜೆಯ ಒಳಗೆ ನಿಮ್ಮ ಅಂಗಡಿಗೆ ಆ ರೂಪಾಯಿಗಳನ್ನು ಕಳಿಸುವೆನು. ಆದರೆ ನೀವು ಇನ್ನೊಂದು ಕೆಲಸ ಮಾಡಬೇಕು. ಅದೇನಂದರೆ, ಶಂಕರಪ್ಪನನ್ನು ಇನ್ನೆರಡು ದಿನಗಳ ವರೆಗೆ ಕಚ್ಚಾ ಕೈದಿನಲ್ಲಿಯೇ ಇರಗೊಡಬೇಕು. ಅಂದರೆ ಅದರಿಂದ ಅವನಿಗೆ ಹಾಗು ಆತನ ಹೆಂಡತಿಗೆ ಪಶ್ಚಾತ್ತಾಪವಾಗುವ ಸಂಭವವಿದೆ'' ಎಂದು ಹೇಳಿ ಕಳಿಸಿದನು.

ಆ ಗುಮಾಸ್ತನು ಹೊರಟುಹೋದಬಳಿಕ ಬಸಲಿಂಗಪ್ಪನು ಮುಗುಟಯ್ಯನೊಡನೆ ಬೀಗರ-ವೇಣಾಪುರದ ಶೀಲವಂತ ಶೆಟ್ಟರ ಸಂಗಪ್ಪನವರ-ಮನೆಗೆ ನಡೆದನು. ಅಲ್ಲಿ ಸಂಗಪ್ಪನು ಇವರ ದಾರಿಯನ್ನೇ ಕಾಯುತ್ತ ಕುಳಿತಿದ್ದನು. ತಮ್ಮ ಸೊಸೆಯ ತಂದೆಯನ್ನು ಪೋಲೀಸರು ಹಿಡಿದೊಯ್ದ ಸಂಗತಿಯು ಅವರಲ್ಲಿಯ ಎಲ್ಲರಿಗೂ ವೇದ್ಯವಾಗಿತ್ತು. ಆ ಸಂಗತಿಯಿಂದ ಮೊದಲೇ ಅಸ್ವಸ್ಥವಾದ ಅವರ ಮನಸ್ಸುಗಳು ಈಗ ಸಂಪೂರ್ಣ ನಿರಾಶೆಪಟ್ಟಿದ್ದವು.

"ಅಯ್ಯನವರೇ, ಇತ್ತ ಮೇಲೆ ಕುಳಿತುಕೊಳ್ಳಿರಿ'' ಎಂದು ಬಸಲಿಂಗಪ್ಪನು ಗಣಂಗಳನ್ನು ಮೇಲೆ ಲೋಡಿಗೆ ಆತು ಕುಳ್ಳಿರಿಸಿ, ಅವರನ್ನು ಕುರಿತು—ಅಪ್ಪನವರೇ, ತಮ್ಮನ್ನು ಇಲ್ಲಿಗೆ ಕರೆತಂದ ಉದ್ದೇಶವಿಷ್ಟೇ; ನಿಮ್ಮ ಕಂತ್ರಾಟವೆಲ್ಲ ನಮಗೆ ಮೊದಲೇ ಗೊತ್ತಾಗಿದೆ; ಆದರೂ ಆ ಸಂಗತಿಯನ್ನು ನಿಮ್ಮ ಬಾಯಿಂದೊಮ್ಮೆ ಕೇಳಬೇಕೆಂದು ನಮ್ಮ ಸಂಗಪ್ಪಶೆಟ್ಟರ ಮನೆಯವರು ಅಪೇಕ್ಷಿಸುತ್ತಾರೆ. ಹ್ಯಾಗೂ ನೀವು ಬೀಗರಿಗೆ ನಿಜಸಂಗತಿಯನ್ನು ತಿಳಿಸೇನೆಂದು ಸಾವಕ್ಕನಿಗೆ ಬಜಾಯಿಸಿರುವಿರಿ. ಅಂದಮೇಲೆ ಆ ಸಂಗತಿಯನ್ನಷ್ಟು ಯಥಾರ್ಥವಾಗಿ ತಿಳಿಸಿಬಿಡಿರಿ, ಅಂದರಾಯಿತು, ಎಂದು ಹೇಳಿದನು.

ಅಯ್ಯನವರು ತಕ್ಕಾವಿಕ್ಕಿಯಾಗಿ ಬಸಲಿಂಗಪ್ಪನ ಮೋರೆಯ ಕಡೆಗೆ ನೋಡುತ್ತ—ಬಸಲಿಂಗಪ್ಪಣ್ಣಾ, ಅಂತೂ ಈ ಸಂಗತಿಯು ನಿಮಗೆ ಗೊತ್ತಾಗಿಬಿಟ್ಟಿದೆ. ಭಲೆ! ಆದರೆ ಅಣ್ಣಾವರೇ, ಗುರುಸಾಕ್ಷಿಯಾಗಿ ಹೇಳುತ್ತೇನೆ; ಈ ತ್ರೋಟಕದಲ್ಲಿ ಎಳ್ಳಷ್ಟೂ ನನ್ನ ಅಂಗವಿರುವದಿಲ್ಲ. ಇದೆಲ್ಲಕ್ಕೆ ಆ ಸಾವಕ್ಕನೇ ಕಾರಣಳು.

ತಾನು ಮುಂಗಾಲಪುಟಿಗೆಯಿಂದ ಕೇಳಿದ ಪ್ರಶ್ನೆಯು ಈಪ್ಸಿತಕ್ಕಿಂತ ಹೆಚ್ಚು ಕೆಲಸ ಮಾಡಿದ್ದನ್ನು ಕಂಡು ಬಸಲಿಂಗಪ್ಪನು ಮತ್ತೆ ಮೆಲ್ಲಗೆ—"ಅಯ್ಯನವರೇ, ನಿಮ್ಮ ಅಂಗವಿಲ್ಲದಿದ್ದರೂ ಸಾವಕ್ಕನ ತ್ರೋಟಕವನ್ನಾದರೂ ನಮಗೆ ಚೆನ್ನಾಗಿ ತಿಳಿಸುವಿರೋ ಇಲ್ಲವೋ?"

"ಆದರೂ ನಾನು ಅವಳಿಗೆ ಮೊದಲೇ ತಿಳಿಸಿದೆನು. ಈ ಜಾತಕವು ನಿಮ್ಮ ಮಗಳು ಬಸವ್ವನದಲ್ಲವೆಂದು; ಆದರೆ ಏನಂದರೂ ಆ ಜಾಲಗಿತ್ತಿಯು ಕೇಳಲಿಲ್ಲ. "ಅಯ್ಯನವರೇ, ಜಾತಕವು ಯಾರದೋ ಯಾಕಿರಲೊಲ್ಲದೇಕೆ? ಅದನ್ನು ಕಟ್ಟಿಕೊಂಡು ನೀವು ಮಾಡುವದೇನು? ಹುಡುಗನ ಜಾತಕದೊಡನೆ ಕೂಡುವದೋ ಇಲ್ಲವೋ ಇಷ್ಟು ನೋಡಿದಿರೆಂದರೆ ತೀರಿತು" ಎಂದು ಅವಳು ದುಂಬಾಲ ಬಿದ್ದಳು.

"ಹಾಗಾದರೆ ಆ ಜಾತಕವು ಯಾರದು?"

"ಅದು ಆ ಚಿನ್ನವ್ವನದು. ಅವಳ ಜಾತಕದೊಳಗೆ ಒಳ್ಳೇ ಸರ್ವೋತ್ಕೃಷ್ಟವಾದ ಉಚ್ಚಗ್ರಹಗಳಿರುತ್ತವೆ; ಆದರೆ ನಾನೇನು ಮಾಡಲಿ? ಅವಳು ಅದನ್ನೇ ಬಸವ್ವನದೆಂದು ಹೇಳಲಿಕ್ಕೆ ಒತ್ತಾಯ ಪಡಿಸಿದಳು."

"ಹೀಗೇನು? ಒಟ್ಟಿಗೆ ದೈವಜ್ಞರೂ ಗಣಂಗಳೂ ಆದ ನೀವು ವಿಶೇಷವೇನೂ ಮಾಡದೆ ಬರೇ ಜಾತಕಗಳನ್ನು ಅದಲು ಬದಲು ಮಾಡಿದಿರೆನ್ನಬೇಕು. ಆದರೂ ಅಪ್ಪನವರೇ, ಈ ಕೆಲಸಕ್ಕಾಗಿ ಸಾವಕ್ಕನು ನಿಮಗೇನು ಸಂಭಾವನೆ ಕೊಡುವದನ್ನು ಗೊತ್ತು ಮಾಡಿಕೊಂಡಿದ್ದಳು?"

"ಅಣ್ಣನವರೇ, ಇನ್ನೇತಕ್ಕೆ ಕೆತ್ತುತ್ತೀರಿ ಆ ಸಂಭಾವನೆಯ ಮಾತನ್ನು? ಅವಳು ಬಹಳ ಒಹಳ ಮಾತಾಡಿದ್ದಳು. ಆದರೆ ಈಗ ಅದನ್ನು ನೆನಿಸುವದರಿಂದ ಪ್ರಯೋಜನವೇನು?"

"ಅದೇಕೆ? ಇನ್ನೂ ಮದುವೆಯೆಲ್ಲಾಗಿದೆ"

"ಇನ್ನೇನಾಗುತ್ತದರೀ ಆ ಲಗ್ನ? ಇಷ್ಟೆಲ್ಲ ಹೊರಬಿದ್ದ ಬಳಿಕ ಆ ದುರ್ಗುಣಿ ಹಾಗು ದುರ್ಗ್ರಹಗಳಿಂದ ಕೂಡಿದ ಜಾತಕದ ಬಸವ್ವನನ್ನು ಸಂಗಪ್ಪನವರು ತಮ್ಮ ಮಗನಿಗೆ ಮಾಡಿಕೊಂಡಾರೋ?

"ಆದರೆ ನೀವಂತೂ ಆ ಪ್ರಕಾರದ ಘಟನೆಯನ್ನು ಹಾಕಿದ್ದಿರಷ್ಟೆ?" ಎಂದು ಬಸಲಿಂಗಪ್ಪನು ಅಯ್ಯನವರಿಗೆ ಹೊಟ್ಟೆಯೊಳಗೆ ನೆಟ್ಟು ಬೆನ್ನಿಲೆ ಬರಿಯುವಂತೆ ಪ್ರಶ್ನೆ ಮಾಡಿದನು. ಹೊರಗಿನ ಪಡಸಾಲೆಯ ಮೇಲೆ ನಡೆದ ಈ ಎಲ್ಲ ಸಂಭಾಷಣವನ್ನು ಯಾದವ್ವ ಮೊದಲಾದವರು ಬಾಗಿಲ ಮರೆಗೆ ನಿಂತು ಕೇಳುತ್ತಿದ್ದರು.

# [೧೧]

ಹೇಮಣ್ಣಾ, ಇನ್ನು ಹೇಗೆ ಆದೀತು? ಬೆಳಗಿನಿಂದ ಚಿಗವ್ವನು ಒಂದೇ ಸವನೆ ಅಳುತ್ತಾಳೆ. ಇನ್ನು ನಮ್ಮ ಬಸವ್ವನ ಲಗ್ನವು ಆ ಶೆಟ್ಟರ ಮಗನೊಡನೆ ಆಗಲಿಕ್ಕಿಲ್ಲೇನು?

"ಚಿನ್ನವ್ವಾ, ನನಗಂತೂ ಏನೂ ಸೂಚಿಸುವದಿಲ್ಲ" ಎಂದು ಬಾವಿಯೊಳಗಿಂದ ನೀರಿನ ಕೊಡವನ್ನು ಮೇಲಕ್ಕೆಳೆಯುತ್ತ ಹೇಮನು—ತಂಗೀ, ನನಗೀಗ ಬಸಲಿಂಗಪ್ಪಣ್ಣನವರು ಕರೆದಿದ್ದಾರೆ. ಅವರೊಡನೆ ಹೋಗಿ ತುರಂಗದೊಳಗಿಂದ ಚಿಗಪ್ಪನನ್ನು ಬಿಡಿಸಿಕೊಂಡು ಬರಬೇಕಾಗಿದೆ. ಮುಂದೇನು ಮಾಡಬೇಕೆಂಬ ಬಗ್ಗೆ ಆ ಮೇಲೆ ಸರ್ವರ ವಿಚಾರದಿಂದಲೂ ಮಾಡೋಣವೆಂದು ಅವರು ಅಂದಿದ್ದಾರೆ. ಅಂದ ಮೇಲೆ ಅವರು ಏನೇನು ಮಾಡುವರೋ ನೋಡೋಣ" ಎಂದನು.

"ಹಾಗಾದರೆ ಅಣ್ಣಾ, ನೀನು ಬೇಗನೆ ಹೋಗು. ಮತ್ತೆ ನೀರು ಬೇಕಾದರೆ ನಾನೇ ಜಗ್ಗಿಕೊಳ್ಳುವೆನು. ಈಗ ಹ್ಯಾಗೂ ಒಗೆಯೋಣವಂತೂ ಆಯಿತು. ಈ ಮುಸರಿಗಳನ್ನಿಷ್ಟು ತಿಕ್ಕಿಕೊಂಡೆನೆಂದರೆ ನನ್ನ ಕೆಲಸವಾದಂತಾಯಿತು."

"ಆದರೆ ತಂಗೀ, ಮುಸರೀತೊಳೆಯಲಿಕ್ಕೆ ನಿನಗೆ ನೀರು ಬೇಡವೆ?"

"ಅಣ್ಣಾ, ಅಷ್ಟು ನಾನು ಜಗ್ಗಿಕೊಂಡೇನು. ನೀನು ಹೋಗು. ನೀನು ನೀರು ಜಗ್ಗುವದನ್ನು ನೋಡಿ ಎದುರಿಗಿನ ಮನೆಯೊಳಗಿರುವ ಬೀಗರು ಏನಂದಾರು!"

"ಏನೂ ಅನ್ನುವದಿಲ್ಲ; ಆದರೆ ಚಿನ್ನಕ್ಕಾ, ನಿನ್ನ ಎದೆ ನೋವು ಈಗ ಹೇಗಿದೆ? ಇನ್ನೂ ನೊಯ್ಯುತ್ತದೇನು?"

"ಇಲ್ಲ. ನಿನ್ನೆನಿಂದ ನೊಯ್ಯುವದು ಕಡಿಮೆಯಾಗಿದೆ. ಆದರೆ ಅಣ್ಣಾ, ಇದೇನು? ನನಗೆ ನೀರು ಸಾಕಾಗಿರಲು, ನೀನು ಸುಮ್ಮನೆ ಜಗ್ಗಿ ಜಗ್ಗಿ ರಟ್ಟೆಗಳನ್ನೇಕೆ ನೋಯಿಸಿಕೊಳ್ಳುತ್ತೀ?"

ಹೀಗೆ ಮಟ ಮಟ ಮಧ್ಯಾಹ್ನಹೊತ್ತಿನಲ್ಲಿ ಬಾವಿಯ ಕಟ್ಟೆಯ ಮೇಲೆ ನಿಂತಿದ್ದ ಆ ಬಂಧು-ಭಗಿನಿಯರಲ್ಲಿ ಸಂಭಾಷಣವು ನಡೆದಿತ್ತು.

ಇಂದು ಸಾವಕ್ಕನ ಮನೆಯಲ್ಲಿ ಎಲ್ಲ ಕಡೆಗೂ ನಿಶ್ಶಬ್ದವಾಗಿತ್ತು. ಇನ್ನೆರಡು ದಿನಗಳಿಗೆ ಮನೆಯಲ್ಲಿ ಮದುವೆಯೆಂದು ನಿನ್ನೆನವರೆಗೆ ಯಾವ ಮನೆಯಲ್ಲಿ ಒಳ್ಳೇ ಗಡ

ಬಡಿಯುತ್ತೋ, ನಿನ್ನಿನ ಒಂದೇ ರಾತ್ರಿಯಲ್ಲಿ ಅದೆಲ್ಲ ಉಮೇದು, ಅದೆಲ್ಲ ಗಡ ಬಡಿಯು ನಿರ್ನಾಮವಾಗಿತ್ತು. ಯಾಕಂದರೆ ರಾತ್ರಿ ಸರಾಸರಿ ಒಂಬತ್ತು ಗಂಟೆಗೆ ಬೀಗರ ಮನೆಯವರು "ನಾವು ನಿಮ್ಮ ಮಗಳೊಡನೆ ಲಗ್ನ ಮಾಡಲಿಚ್ಛಿಸುವದಿಲ್ಲ. ನೀವು ನಮ್ಮನ್ನು ಮೋಸಪಡಿಸಬೇಕೆಂದು ಒಡ್ಡಿದ ನಿಮ್ಮ ಜಾಲವು ಹರಿದು, ಅಯುತ ಕಾಲಕ್ಕೆ ನಿಮ್ಮ ಕಪಟನಾಟಕವೆಲ್ಲ ನಮಗೆ ತಿಳಿದಿರುತ್ತದೆ." ಎಂದು ಸಾವಕ್ಕನಿಗೆ ಹೇಳಿಕಳಿಸಿದ್ದರು. ಬೀಗರು ಹೀಗೆಂದು ಹೇಳಿಕಳಿಸಿದ ಕೂಡಲೆ ಸಾವಕ್ಕನ ಕಣ್ಣಿಗೆ ಅಂಜನ ಹಚ್ಚಿದಂತಾಯಿತು. ತಾನು ಕಲ್ಪಿಸಿದ ಮನೋರಾಜ್ಯವು ಹಾಳಾಗಲಿಕ್ಕೆ ಮುಗುಟಯ್ಯನೇ ಮುಖ್ಯ ಕಾರಣನೆಂದು ಆಕೆಗೆ ತತ್‍ಕ್ಷಣವೇ ಗೊತ್ತಾಯಿತು. ಆದರಿಂದ ಆಕೆಗೆ ಸಿಟ್ಟಿನ ಭರತಿಯು ಬಂದಂತಾಗಿ ಆ ಆವೇಶದಲ್ಲಿ ಅವಳು ನಮ್ಮ ದೈವಜ್ಞರೂ ಗಣಂಗಳೂ ಆದ ಮುಗುಟಯ್ಯನವರ ಹಿತಾರ-ಪಿತಾರಗಳನ್ನು ಉದ್ಧಾರ ಗೊಳಿಸಿದಳು. ಹೀಗೆ ಎಷ್ಟೋ ರಾತ್ರಿಯಾಗುವವರೆಗೆ ಅವಳು ಅಯ್ಯಪ್ಪನ ಪೂರ್ವ ಜರಿಗೆಲ್ಲ ಬೈಗಳ ರೂಪದಿಂದ ತಿಲಾಂಜಲಿಯನ್ನರ್ಪಿಸಿದ ಮೇಲೆ ಆಕೆಗೆ ಮುಂದಿನ ಸ್ಥಿತಿಯ ಬಗ್ಗೆ ಧ್ಯಾಸವಾಯಿತು. ತಮ್ಮ ಬಸವ್ವನ ಲಗ್ನವು ಇನ್ನು ಆ ಶೆಟ್ಟರ ಮಗನೊಡನೆ ಆಗಲಾರದು; ತನ್ನ ಎಲ್ಲ ಉತ್ಸಾಹವೂ ಭಂಗವಾಯಿತು; ತಾನು ಮಾಡಿದ ಸೌರಣೆಯು ನಿಷ್ಫಲವಾಯಿತು; ಹಾಗು ತನ್ನ ದುರ್ಲೌಕಿಕವು ಊರೆಲ್ಲ ಹಬ್ಬಿತು, ಇತ್ಯಾದಿ ವಿಚಾರಗಳು ಅವಳ ಮನಸ್ಸಿನಲ್ಲಿ ಬಂದು ಅವಳಿಗೆ ಖೇದವಾಗುವಷ್ಟರಲ್ಲಿ, ತನ್ನ ಗಂಡನ ಮೇಲೊದಗಿದ ಸಂಕಟದ ನೆನವೂ ಆಕೆಗಾಯಿತು. ಇಂದು ಅವಳಿಗೆ ಆ ಪ್ರತಿಯೊಂದು ಸಂಗತಿಯು ಬೇರೆ ರೂಪದ್ದಾಗಿಯೇ ಕಾಣಿಸ ಹತ್ತಿತು. ಮೆಲ್ಲ-ಮೆಲ್ಲನೆ ಅವಳ ಮನಸ್ಸಿನಮೇಲೆ ಇಷ್ಟ ಪರಿಣಾಮವಾಗಲಾರಂಭಿಸಿತು. ಆದರಿಂದ ಅವಳ ತಲೆಯೊಡತಕ್ಕೆ ಪ್ರಾರಂಭವಾಯಿತು. ಮುಂದೇನು ಮಾಡಬೇಕೆಂಬ ಬಗ್ಗೆ ಅವಳಿಗೇನೂ ಹೊಳೆಯದಾಯಿತು. ಕಡೆಗೆ ಅವಳು ಕಂಗೆಟ್ಟಳು. ದುಃಖಾತಿರೇಕದಿಂದ ಅವಳ ಹೃದಯವು ಆವರಿಸಿತು. ಆಗ ಅವಳ ಕಣ್ಣೊಳಗಿಂದ-ಆಕೆಗೆ ತಿಳಿಯಹತ್ತಿದಂದಿನಿಂದ ಇದೇ ಮೊದಲಾಗಿ-ಕಣ್ಣೀರಿನ ಪ್ರವಾಹಕ್ಕೆ ಪ್ರಾರಂಭವಾಯಿತು. ಸಾವಕ್ಕನಲ್ಲಿಯ ದುರಭಿಮಾನವು ಆ ಕಣ್ಣೀರಿನ ರೂಪದಿಂದ ಸಂಪೂರ್ಣವಾಗಿ ತೊಳೆದುಹೋಯಿತು.

ಬೆಳಗಾದ ಕೂಡಲೆ ದಿನದಂತೆ ಸಾವಕ್ಕನು ಅಟ್ಟವಿಳಿದು ಬಾರದ್ದನ್ನು ಕಂಡು—"ಅವ್ವನೇಕೆ ಬರಲಿಲ್ಲ"ಂಬದನ್ನು ನೋಡುವದಕ್ಕೆ ಬಸವ್ವನು ಅಟ್ಟದ ಮೇಲೆ ಹೋದಳು. ಬಸವ್ವನನ್ನು ಕಂಡಕೂಡಲೆ ಸಾವಕ್ಕನು ರೇಗಿಗೆದ್ದು—

'' ಸಾಡೇಸಾತಿ-ಭೋಸಡಿನ್ನ-ತಂದು, ನೀನು ಇಲ್ಲೇಕೆ ಬಂದೆ ಬಸ್ಯೀ, ಹೋಗು, ಹೊರಡು ಇಲ್ಲಿಂದ; ನಿನ್ನ ಕರೇಮುಸಡೀ ನನಗೆ ತೋರಿಸಬೇಡ.'' ಎಂದಂದು ಬೇರೆಕಡೆಗೆ ಮೋರೆ ತಿರುಗಿಸಿ ಕುಳಿತಳು. ಪಿಟ್ಟೆಂದು ಅನ್ನದೆ ಅಳುಮೋರೆಯ ಬಸವ್ವನು ಕೆಳಗಿಳಿದಳು. ಆಕೆಯು ಹೊರಟುಹೋದಮೇಲೆ ಮತ್ತೆ ಎಷ್ಟೋ ಹೊತ್ತಿನವರೆಗೆ ಸಾವಕ್ಕನು ಅಶ್ರು ವರ್ಷಿಸಿದಳು. ಹತ್ತುಗಂಟೆಯಾಗಿ ಊಟದ ತಯಾರಿಯಾದರೂ ಅವಳು ಕೆಳಗಿಳಿದು ಬರಲಿಲ್ಲ. ಆಗ ಚಿನ್ನವ್ವನು ಅಂಜುತ್ತಂಜುತ್ತ ಅಟ್ಟವನ್ನೇರಿ ಹೋಗಿ ಸಾವಕ್ಕನ ಎದುರಿಗೆ ನಿಂತುಕೊಂಡಳು. ಸಾವಕ್ಕನ ಕಣ್ಣೊಳಗಿಂದ ಅಶ್ರುಹೊರಟದ್ದನ್ನು ಅವಳು ಇದೇ ಮೊದಲು ನೋಡಿದ್ದು. ಅದನ್ನು ಕಂಡು ಚಿನ್ನವ್ವನಿಗೂ ಬಲು ದುಃಖವಾಯಿತು. ಆದರೆ ಚಿಗವ್ವನೆದುರಿಗೆ ಮಾತಾಡುವ ಧೈರ್ಯವು ಅವಳಿಗಾಗಲಿಲ್ಲ. ಅವಳನ್ನು ನೋಡಿದಕೂಡಲೆ ಸಾವಕ್ಕನು ತನ್ನ ಕಣ್ಣುಗಳನ್ನೊರಿಸಿಕೊಂಡು ಸುಮ್ಮನೆ ಕೆಳಗಿಳಿದು ಬಂದಳು. ಇಂದು ಆ ಮನೆಯಲ್ಲಿ ಸಾವಕ್ಕನು ಇರುವಳೋ ಇಲ್ಲವೋ ಎಂಬದು ಕೂಡ ನೆರೆಹೊರೆಯವರಿಗೆ ಗೊತ್ತಾಗಲಿಲ್ಲ. ಅವಳು ಅಂದು ಏನೂ ಮಾತಾಡದೆ ಪ್ರಾತರ್ವಿಧಿ, ಮುಖಮಾರ್ಜನ, ಸ್ನಾನಗಳನ್ನು ತೀರಿಸಿಕೊಂಡು ಹ್ಯಾಗಾದರೂ ಮಾಡಿ ನಾಲ್ಕು ತುತ್ತು ಅನ್ನವನ್ನುಂಡಳು; ಹಾಗು ಅದೇ ಕಾಲಿಲೆ ಮತ್ತೆ ಅಟ್ಟವನ್ನೇರಿ ಹೋಗಿ ಕುಳಿತಳು.

ಚಿಗವ್ವನು ಉಂಡುಹೋದ ಮೇಲೆ ಒಗೆಯುವದಕ್ಕೂ ಮುಸುರೆ ತಿಕ್ಕುವದಕ್ಕೂ ಚಿನ್ನವ್ವನು ಹಿತ್ತಲದೊಳಗಿನ ಬಾವಿಗೆ ಹೋಗಿದ್ದಳು. ಅಂದು ಹೇಮಾದ್ರಿಯು ಮನೆಯಲ್ಲಿಯೇ ಇದ್ದನು. ತನ್ನ ತಂಗಿಯು ಬಾವಿಗೆ ಹೋದುದನ್ನು ಕಂಡು ಅವನೂ ಅವಳ ಹಿಂದಿನಿಂದ ಅಲ್ಲಿಗೆ ಹೋದನು;ಹಾಗು ಹಿಂದೆ ಉದಹರಿಸಿದಂತೆ ಆ ಬಂಧು-ಭಗಿನಿಯರಲ್ಲಿ ಸಂಭಾಷಣ ನಡೆದಿತ್ತು. ಸಾಕಷ್ಟು ನೀರನ್ನು ಜಗ್ಗಿ ಹಾಕಿ, ಹೇಮನು ಮನೆಯೊಳಗೆ ಬರಹತ್ತಿದನು. ಅವನನ್ನು ಕಿಡಿಕೆಯೊಳಗಿಂದ ನೋಡಿ ಸಾವಕ್ಕನು—ಹೇಮಾದ್ರೀ, ಇತ್ತ ಬಾ, ಎಂದು ಕರೆದಳು. ಚಿಗವ್ವನು ಕರೆದುದನ್ನು ಕೇಳಿ ಹೇಮನ ಎದೆಯೊಳಗೆ ಧಸ್ಸೆಂದಿತು. ತಾನು ಚಿನ್ನವ್ವನಿಗೆ ನೀರು ಜಗ್ಗಿ ಕೊಟ್ಟದ್ದನ್ನು ನೋಡಿ, ಚಿಗವ್ವನು ತನ್ನನ್ನು ಬಯ್ಯುವದಕ್ಕಾಗಿಯೇ ಕರೆಯುವಳೆಂದು ಆತನು ತಿಳಿದುಕೊಂಡನು. ಚಿಗವ್ವನು ಅಣ್ಣನನ್ನು ಕರೆದದ್ದನ್ನು ಕೇಳಿ ಚಿನ್ನವ್ವನಿಗೂ ಇದರಂತೆಯೇ ಅನಿಸಿತು. ಕೂಡಲೆ ಹೇಮನು ಮೆಲ್ಲ ಮೆಲ್ಲನೆ ಅಟ್ಟವನ್ನೇರಿ ಹೋಗಿ ಚಿಗವ್ವನ ಎದುರಿಗೆ ಬಹು ದೂರದಲ್ಲಿ ನಿಂತುಕೊಂಡನು. ಸಾವಕ್ಕನು ಕಿಟಿಕೆಯ ಬಳಿಯಲ್ಲಿ ಚಿಂತಾಕ್ರಾಂತಳಾಗಿ ಕುಳಿತುಕೊಂಡಿದ್ದಳು. ಹೇಮನ

ನನ್ನು ಕಂಡು ಆಗ ಸಾವಕ್ಕನು—ತಮ್ಮಾ, ನಿಮ್ಮ ಚಿಗಪ್ಪನ ಸಂಬಂಧ ಏನೇನು ನಡೆದದೆ? ಶೇಟಜಿಗೆ ಎಷ್ಟು ರೂಪಾಯಿ ಕೊಡಬೇಕು? ಏನಾದರೂ ವ್ಯವಸ್ಥೆ ಮಾಡಿ, ಹಣ ಭರ್ತಿ ಮಾಡಿದರೆ ಅವರ ಬಿಡುಗಡೆಯಾಗಲಾರದೆ?'' ಎಂದು ಸೌಮ್ಯಶಬ್ದಗಳಿಂದ ಕೇಳಿದಳು.

ಚಿಗವ್ವನ ಇಷ್ಟು ಸರಳ ಭಾಷಣವನ್ನು ಕೇಳಿ ಹೇಮನಿಗೆ ಬಹು ಸೋಜಿಗವಾಯಿತು. ತಮ್ಮ ಚಿಗವ್ವನ ಭಾಷಣವು ಇಷ್ಟು ಸೌಮ್ಯವೂ ಇಷ್ಟು ಮೆತ್ತಗೂ ಆದದ್ದನ್ನು ಅವನು ಇಂದೇ ಕಂಡಿದ್ದನು. ಇಲ್ಲದಿದ್ದರೆ ಚಿಗವ್ವನು ದಿನಾಲು ಮಾತಾಡಲಿಕ್ಕೆ ಹತ್ತಿದರೆ, ಮನೆಯ ಪ್ರತಿಯೊಂದು ಮೂಲೆಯಿಂದಲೂ ಮಾಳಿಗೆಯಿಂದಲೂ ಪ್ರತಿಧ್ವನಿ ಹೊರಡುತ್ತಿತ್ತು. ಆದರೆ ಇಂದಿನ ದಿವಸವೇ ಬೇರೆಯಾಗಿತ್ತು. ಹೇಮನು ಚಿಗಪ್ಪನ ಸಂಬಂಧದ ಎಲ್ಲ ಸಂಗತಿಯನ್ನೂ ಚಿಗವ್ವನಿಗೆ ತಿಳಿಸಿದನು. ಅದನ್ನೆಲ್ಲ ಕೇಳಿಕೊಂಡು ಕಡೆಗೆ ಅವಳು—ತಮ್ಮಾ ಹೇಮಾದ್ರೀ, ನೀನು ಹೇಳಿದರೆ ಬಸಲಿಂಗಪ್ಪನವರು ಕೇಳಿಯಾರು; ಹಾಗು ಅವರು ಪ್ರಯತ್ನ ಮಾಡಿದರೆ ಇವರ ಬಿಡುಗಡೆಯಾದೀತು. ಇಲ್ಲದಿದ್ದರೆ ಯಾವ ಪ್ರಸಂಗವುಂಟಾದೀತೋ ದೇವರೇ ಬಲ್ಲ. ನಿನ್ನೆಯೇ ಅವರು ನನಗೆ ಹೇಳಿದರು; ಆದರೆ ಆಗ ನಾನು ದುರಭಿಮಾನದಿಂದ ಸೆಟೆಯುತ್ತಿದ್ದೆ......''

ತನ್ನ ಚಿಗವ್ವನನ್ನು ಮತ್ತೆ ಮಾತಾಡಗೊಡದೆ ಹೇಮನು—ಚಿಗವ್ವಾ, ನೀವೇನೂ ಚಿಂತೆ ಮಾಡಬೇಡಿರಿ. ಬಸಲಿಂಗಪ್ಪಣ್ಣನವರು ನಿನ್ನೆಯೇ ಎಲ್ಲ ಹಣವನ್ನು ಭರಣಾ ಮಾಡಿರುತ್ತಾರೆ. ಇನ್ನು ಸ್ವಲ್ಪ ಹೊತ್ತಿನಲ್ಲಿ ಚಿಗಪ್ಪನವರನ್ನು ಬಿಡಿಸಿಕೊಂಡು ಬರುವದಕ್ಕೆಂದು ನಾವು ಕುರಂಗಿಗೆ ಹೋಗುವವರಿದ್ದೇವೆ, ಎಂದು ಹೇಳಲು,

ಸಾವಕ್ಕ—''ಏನಂದಿ, ಬಸಲಿಂಗಪ್ಪನವರು ಸ್ವತಃ ಹಣತುಂಬಿದರೇ, ಹೇಮಾದ್ರೀ? ಎಂಥ ಸೋಜಿಗವಿದು? ಇಂಥ ಸದ್ಗೃಹಸ್ಥರಿಗೆ ನಿನ್ನೆ ನಾನು ಸರಿಯಾದ ಉತ್ತರ ಕೂಡ ಕೊಡಲಿಲ್ಲವಲ್ಲ!!'' ಎಂದು ಅಳಲಾರಂಭಿಸಿದಳು.

ವಾಚಕರೇ, ನೋಡಿದಿರಾ ಈ ಅವಸ್ಥೆಯನ್ನು! ಯಾವ ದುಷ್ಟಹೆಂಗಸು ತನ್ನ ಪ್ರತಿಯೊಂದು ಮಾತಿನಿಂದ ಮಂದಿಯ ಕಣ್ಣಿನಿಂದ ನೀರನ್ನು ಸುರಿಸುತ್ತಿದ್ದಳೋ, ಅದೇ ಅವಳು ಇಂದು ತಾನೇ ನುಡಿಯುವ ಪ್ರತಿಯೊಂದು ಮಾತಿಗೂ ಕಣ್ಣೀರು ಸುರಿಸುತ್ತಿದ್ದಳೆಂಬದನ್ನು ನೋಡಿದರೆ, ಆಶ್ಚರ್ಯವಾಗುವದಿಲ್ಲವೇ? ಇಂದು ಸಾವಕ್ಕನ ಕಣ್ಣುಗಳಿಗೆ ಆಗಾಗ್ಗೆ ನೀರು ಬರುವದು ಯಾತರ ಪರಿಣಾಮವಾಗಿತ್ತು?

ಪರಿಸ್ಥಿತಿ ಬದಲಾದುದ್ದರ ಮೊದಲೇ ಆಘಾತವೇ ಆದಾಗಿತ್ತು. ಆ ಆಘಾತವು ಯೋಗ್ಯಕಾಲಕ್ಕೆ ಸಂಧಿಸಾಧಿಸಿ ಬೀಳತಕ್ಕ ಆಯಕಟ್ಟಿನ ಸ್ಥಳಕ್ಕೆ ಬಿದ್ದಿತೆಂದರೆ, ಇಂಥ ವಿಲಕ್ಷಣ ಕ್ರಾಂತಿಯಾಗತಕ್ಕದ್ದೇ. ಮನುಷ್ಯನು ಎಂಥ ಗರ್ವಿಷ್ಠನೇ ಇರಲಿ, ದುರಭಿಮಾನಿಯೇ ಇರಲಿ, ಈ ಪರಿಸ್ಥಿತಿಯು ಪೆಟ್ಟು ತಗಲಿತೆಂದರೆ, ಅವನನ್ನು ಕ್ಷಣಹೊತ್ತಿನಲ್ಲಿ ಬೆಣ್ಣೆಯಗಿಂತಲೂ ಮೃದುವಾಗಿ ಮಾಡಿಬಿಡುತ್ತದೆಂಬುವದಕ್ಕೆ ನಮ್ಮ ಸಾವಕ್ಕನ ಈಗಿನ ಸ್ಥಿತಿಯೇ ಉದಾಹರಣವಾಗಿದೆ.

ಚಿಗವ್ವನಿಗೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ಹೇಮಾದ್ರಿಯು ಕೆಳಗಿಳಿದು ಬಂದನು. ಆಗ ಗಂಗವ್ವನು ತೆಳಲುತ್ತ ತನ್ನ ಕೋಣೆಯ ಬಾಗಿಲವರೆಗೆ ಬಂದು ಕುಳಿತು, ತನ್ನಲ್ಲಿಯೇ ಏನೇನೋ ವಿಚಾರ ಮಾಡುತ್ತಿದ್ದಳು. ಈಚೆಗೆ ಮೂರು ವರ್ಷಗಳಲ್ಲಿ ಅವಳು ತನ್ನ ಕೋಣೆಯ ಬಾಗಿಲವರೆಗೆ ಕೂಡ ಬಂದಿರಲಿಲ್ಲ. ಆದರೆ ಬಸಲಿಂಗಪ್ಪನ ಪ್ರೋತ್ಸಾಹದಿಂದ ಹೇಮಾದ್ರಿಯು ಚಿಗವ್ವನಿಗೆ ತಿಳಿಯದ ಹಾಗೆ ತನ್ನ ತಾಯಿಗೆ ಈಗ ಒಬ್ಬ ಪಂಡಿತನ ಔಷಧ ಕೊಡಿಸುತ್ತಿದ್ದನು. ಅದು ಗಂಗವ್ವನ ಬೇನೆಗೆ ರಾಮಬಾಣ ಔಷಧವಾಗಿತ್ತು. ಅದರಿಂದಲೇ ಈಗ ಹದಿನೈದು ದಿನಗಳಲ್ಲಿ ಬೇನೆಯ ಲಕ್ಷಣವು ಹಿಮ್ಮೆಟ್ಟಹತ್ತಿ, ಅವಳಿಗೆ ಅಲ್ಪಸ್ವಲ್ಪ ಶಕ್ತಿಯೂ ಬರತೊಡಗಿತ್ತು. ಅದಕ್ಕೆ ಪ್ರಮಾಣವೇ ಇಂದು ಅವಳು ತಾನಾಗಿಯೇ ಕೋಣೆಯ ಬಾಗಿಲಿಗೆ ಬಂದು ಕುಳಿತದ್ದು. ಹೇಮನು ಕೆಳಗೆ ಬಂದಮೇಲೆ ಚಿಗವ್ವನ ಬಳಿಯಲ್ಲಿ ನಡೆದ ಸಂಗತಿಯನ್ನು ತಾಯಿಗೆ ಮೆಲ್ಲಮೆಲ್ಲಗೆ ತಿಳಿಸಿದನು; ಹಾಗು ನಿನ್ನೆ ಶೆಟ್ಟರ ಮನೆಯಲ್ಲಿ ಹೊರಬಿದ್ದ ಮುಗುಟಯ್ಯನವರ ತಂತ್ರವನ್ನೂ ತಿಳಿಸಿದನು. ಆಗ ಗಂಗವ್ವನು—“ ತಮ್ಮಾ, ನಾನೇ ಹೋಗಿ ಆ ಶೆಟ್ಟರ ಯಾದವ್ವಕ್ಕನವರಿಗೆ ಭೆಟ್ಟಿಯಾಗಿ ಕೆಲವು ಮಾತಾಡಬೇಕೆಂದಿದ್ದೇನೆ. ಜಾತಕ ನೋಡದೆ ಲಗ್ನವಾದ ಎಷ್ಟೋಜನ ದಂಪತಿಗಳು ಸುಖ-ಸಮಾಧಾನದಿಂದ ಸಂಸಾರ ಮಾಡುತ್ತಿರುವದನ್ನು ನಾನು ಕಣ್ಣಾರೆ ನೋಡಿದ್ದೇನೆ; ಅವರೂ ನೋಡಿರಬಹುದು. ಹಾಗೆಯೇ ನಮ್ಮ ಬಸವ್ವನೊಡನೆ ನಿಮ್ಮ ಮಗನ ಲಗ್ನ ಮಾಡಿಬಿಡಿರೆಂದು ಅವರಿಗೆ ತಿಳಿಸಬೇಕೆನ್ನುತ್ತೇನೆ; ಹಾಗು ಒಮ್ಮೆ ನಿಶ್ಚಯವಾದ ಈ ಲಗ್ನವನ್ನು ಮುರಿಯಬೇಡಿರೆಂದೂ ಅವರಿಗೆ ಸೆರಗೊಡ್ಡಿ ಬೇಡಿಕೊಳ್ಳಬೇಕೆನ್ನುತ್ತೇನೆ. ನಾವು ಪ್ರಯತ್ನವಂತೂ ಮಾಡಬೇಕು; ಆ ಮೇಲೆ ಬಸವ್ವನ ದೈವವು.”

“ ಆದರೆ ಅವ್ವಾ, ನೀನು ಅಲ್ಲಿಯವರೆಗೆ ಹೋಗುವ ಬಗೆ ಹೇಗೆ? ”

" ನೀನು ಕೈಕೊಟ್ಟು ಕರೆದೊಯ್ದರೆ ನಾನು ಅಲ್ಲಿಗೆ ಹೇಗಾದರೂ ಮಾಡಿ ಬಂದೇನು. "

" ಹಾಗಾದರೆ ಕುಸ ತಡೆ. ಬಸಲಿಂಗಪ್ಪಣ್ಣಾವರು ನನಗೆ ಈಗ ಕರೆದಿರುತ್ತಾರೆ. ಅತ್ತ ಹೋಗಿ ಬರುತ್ತೇನೆ."

"ಹಾಗಾದರೆ ತಮ್ಮಾ, ಶಿವಕ್ಕನವರಿಗೆ ನಾನು ಕರೆದಿರುವೆನೆಂದು ಹೇಳಿ ಕಳಿಸಿ ಕೊಡು. ಅವರು ಬಂದರೆಂದರೆ ಅವರೊಡನೆಯೇ ನಾನು ಹೋಗುತ್ತೇನೆ.

ತನ್ನ ತಾಯಿಯ ಸಂದೇಶವನ್ನು ಶಿವಕ್ಕನಿಗೆ ತಿಳಿಸಿ, ಹೇಮಾದ್ರಿಯು ಬಸಲಿಂಗಪ್ಪನೊಡನೆ ಹೊರಟನು. ತಾನು ಹೇಳಿದಂತೆ ಬಸಲಿಂಗಪ್ಪನು ನಾನೂರು ರೂಪಾಯಿಗಳನ್ನು ನಿನ್ನೆಯೇ ಸೇಟಜಿಯ ಅಂಗಡಿಗೆ ಕಳಿಸಿದ್ದನು. ಆದರೆ ಕುಸ ತಲೆಗೆ ತಾಕುವ ಸಲುವಾಗಿ ಶಂಕರಪ್ಪನನ್ನು ಮಾತ್ರ ಇನ್ನೂ ಕುರಂಗದಲ್ಲಿಯೇ ಇರಗೊಟ್ಟಿದ್ದನು. ಅದೊಂದೇ ರಾತ್ರಿಯನ್ನು ಶಂಕರಪ್ಪನು ಕುರಂಗದ ಆ ಕೋಣೆಯಲ್ಲಿದ್ದು ಕಳೆದನು. ಆದರೆ ಆ ರಾತ್ರಿಯು ಅವನಿಗೆ ಮಹಾಯುಗದಂತೆ ಪರಿಣಮಿಸಿತು. ಪಶ್ಚಾತ್ತಾಪದಿಂದ ಬೆಯ್ಯುತ್ತ ಆತನು ಆ ಇಡಿರಾತ್ರಿಯನ್ನು ಆ ಕೋಣೆಯ ಒಂದು ಮೂಲೆಯಲ್ಲಿ ಕುಳಿತು ಕಳೆದಿದ್ದನು. ತಮ್ಮ ಪೂರ್ವಜರ ಲೌಕಿಕ, ಮಾನ ಮರ್ಯಾದೆಗಳೂ, ತನ್ನ ಅಧಃಪತನವೂ ಆಗ ಅವನಿಗೆ ನೆನಪಾಗಿ ಅವನನ್ನು ಭ್ರಮಿಷ್ಠನನ್ನಾಗ ಮಾಡಹತ್ತಿದ್ದವು. ತನಗೆ ನಾಲ್ಕಾರು ವರ್ಷಗಳ ಸಶ್ರಮಶಿಕ್ಷೆಯಾಗುವದೆಂದು ಆಗ ಆತನಿಗನಿಸುತ್ತಿತ್ತು; ಹಾಗು ಯಾವಾಗ ಆ ಶಿಕ್ಷಾಸತ್ರದ ನೆನಪು ಆತನಿಗಾಗುತ್ತಿತ್ತೋ, ಆಗಂತೂ ಆತನ ಮನಸ್ಸು ಕೇವಲ ಶೋಚನೀಯಾವಸ್ಥೆಯನ್ನು ಹೊಂದುತ್ತಿತ್ತು. ಒಂದೇ ರಾತ್ರಿಯಲ್ಲಿ ಆತನು ಪಶ್ಚಾತ್ತಾಪಾಗ್ನಿಯಿಂದ ಚನ್ನಾಗಿ ಬೆಂದಿದ್ದನು. ತನ್ನ ಕೋಣೆಯೊಳಗೆ ಬಸಲಿಂಗಪ್ಪನು ಹೇಮಾದ್ರಿಯೊಡನೆ ಬರುವದನ್ನು ಕಂಡು ಆ ಪಶ್ಚಾತ್ತಾಪದಗ್ಧ ಮನಸ್ಕನಾದ ಶಂಕರಪ್ಪನು ಕಳಗೆ ಮೋರೆ ಹಾಕಿಕೊಂಡು ಕುಳಿತನು.

"ಶಂಕರಪ್ಪಣ್ಣಾ, ನೀವು ಇದೆಂಥ ಕೆಲಸ ಮಾಡಿದಿರಿ? ಇದರ ಪರಿಣಾಮವೇನಾದೀತೆಂಬದರ ಅರಿವು ನಿಮಗದೆಯೇನು?"

"ಬಸಲಿಂಗಪ್ಪಾ, ನಾನು ನಿನ್ನ ಕಾಲು ಬೀಳುತ್ತೇನೆ. ನೀನು ಈ ಸಂಕಟದೊಳಗಿಂದ ನನ್ನನ್ನು ಹೇಗಾದರೂ ಪಾರುಮಾಡು. ನಾನು ಯಾರು, ಎಂಥ ಹೇಸಿ ಕೆಲಸ ಮಾಡಿದೆನು...ನನ್ನ ಮರ್ಯಾದೆಯಂತೂ ಮಣ್ಣು ಪಾಲಾಯಿತು...ನಮ್ಮ ಪೂರ್ವಜರ ಲೌಕಿಕಕ್ಕೂ ನನ್ನ ಚಂಡಾಲನ ಈ ಕೃತಿಯಿಂದ ಕಲಂಕ ಹತ್ತಿತು.

ನನಗೆ ಈ ದುರ್ಬುದ್ಧಿಯು ಎಲ್ಲಿಂದ ಪ್ರಾಪ್ತವಾಯಿತೋ...'' ಎಂದೆಂದು ಉಟ್ಟ ಧೋತರದ ಸೆರಗನ್ನು ಮೋರೆಯಮೇಲೆ ಹಾಕಿಕೊಂಡು ಅವನು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು.

''ಶಂಕರಪ್ಪಾ, ನಿನ್ನ ವ್ಯಸನೀ ಮಿತ್ರರಿಂದಲೇ ನಿನಗೀ ದುರ್ಬುದ್ಧಿಯು ಪ್ರಾಪ್ತವಾಯಿತು ತಿಳಿಯಿತೇ. ಈಗ ಕರೆ, ಆ ನಿನ್ನ ಜೀವದ ಗೆಳೆಯರನ್ನು ಈ ಶಿಕ್ಷೆ ಭೋಗಿಸಲಿಕ್ಕೆ.''

''ಆ ಚಂಡಾಲರು ನನ್ನ ಸರ್ವಸ್ವದ ಘಾತವನ್ನು ಮಾಡಿದರು, ನನಗೆ ಸೆರೇದ ಚಟ ಕಲಿಸಿ ನನ್ನ ಬಾಳುವೆಯನ್ನು ಮಣ್ಣುಗೂಡಿಸಿದವರೇ ಆ ಸೂಳೀ ಮಕ್ಕಳು......''

''ಶಂಕರಪ್ಪಾ, ಈಗ ಅವರನ್ನು ಆಡಿಕೊಂಡು ಪ್ರಯೋಜನವೇನು? ನೀನೇ ಅವರ ಬಲಿಗೆ ಬಿದ್ದು ವ್ಯಸನಾಧೀನನಾಗದಿದ್ದರೆ......''

''ಬಸಲಿಂಗಪ್ಪಣ್ಣಾ, ಬಿಡು ಆ ಘಾತಕರ ಹೆಸರನ್ನೆತ್ತಬೇಡಬಿಡು. ನಿನ್ನ ಆಣೆಯಾಗಿ ಹೇಳುತ್ತೇನೆ; ಇನ್ನು ನಾನು ಆ ಸೆ......''

''ಸಾಕು, ಶಂಕರಪ್ಪಾ, ಸಾಕು; ನಿನ್ನ ಮಾತಿನಮೇಲೆ ನನ್ನ ವಿಶ್ವಾಸವದೆ, ಎಂದು ಆತನ ಕೈಹಿಡಿದು ಬಸಲಿಂಗಪ್ಪನು—ಶಂಕರಪ್ಪಾ, ನಿನಗಾಗಿ ನಾನು ಈಗ ಏನು ಮಾಡಬೇಕೆನ್ನುತ್ತೀ?''

''ನೀವು ನನ್ನನ್ನು ಇಲ್ಲಿಂದ ಬಿಡಿಸಿಕೊಂಡು ನಡೆಯಿರಿ. ಬಸಲಿಂಗಪ್ಪಾ, ಇಲ್ಲಿಯ ನರಕವಾಸವನ್ನು ನನ್ನಿಂದ ಸಹಿಸುವದಾಗುವದಿಲ್ಲ; ಇಲ್ಲಿಯೇ ಬಿಟ್ಟರೆ ನಾನು ಸಾಯುತ್ತೇನೆ.''

''ನಿನ್ನನ್ನು ಬಿಡಿಸಿಕೊಂಡು ಒಯ್ಯಲಿಕ್ಕೆ ನಾನೆಷ್ಟರವನು? ಈ ನಿಮ್ಮ ಅಣ್ಣನ ಮಗನೇ ನಿನ್ನನ್ನು ಬಿಡಿಸಿಕೊಂಡು ಒಯ್ಯುವವನು. ಈ ವರೆಗೆ ನಿಮ್ಮಣ್ಣನ ಈ ಎರಡೂ ಹುಡುಗರನ್ನು ನೀನು ಹಾಗು ನಿನ್ನ ಹೆಂ......''

''ತಿಳಿಯಿತು. ನಾನೂ ನನ್ನ ಹೆಂಡತಿಯೂ ಕೂಡಿ ಇವರನ್ನು ಗೋಳಾಡಿಸಿದೆವೆನ್ನುವಿರಷ್ಟೇ? ಅಷ್ಟೇ ಏಕೆ, ಚೆನ್ನಾಗಿ ಜೆಯ್ಯಿಸಿ ತಿಂದೆವೆನ್ನಬಾರದೆ?''

''ಶಂಕರಪ್ಪಾ, ಅವೇ ಹುಡುಗರೇ ಈಗ ನಿನ್ನ ಉಪಯೋಗಕ್ಕೆ ಬೀಳುತ್ತವೆ ನೋಡು. ಇಗೋ, ಈ ಹೇಮಾದ್ರಿಯೇ ನಿನ್ನನ್ನು ಇಲ್ಲಿಂದ ಬಿಡುಗಡೆಮಾಡಿಸಿರು ವನು. ಹೇಮಾದ್ರೀ, ತೋರಿಸು, ನಿಮ್ಮ ಚಿಗಪ್ಪನಿಗೆ ಆ ಕಾಗದವನ್ನು.''

ಹೇಮನು ಬಕ್ಕಣದೊಳಗಿನ ಒಂದು ಕಾಗದವನ್ನು ತೆಗೆದು ಚಿಗಪ್ಪನ ಕೈಗಿತ್ತನು. ಅದರಲ್ಲಿ “ನನಗೆ ಮುಟ್ಟತಕ್ಕ ಹಣವು ನಿಮ್ಮಿಂದ ಮುಟ್ಟಿದ್ದು ಶಂಕರಪ್ಪನ ಮೇಲೆ ನನ್ನ ಯಾವ ಪ್ರಕಾರದ ಆರೋಪವೂ ಇರುವದಿಲ್ಲ” ಎಂದು ಶೇಟಜಿಯು ಹೇಮನ ಹೆಸರಿಲೆ ಬರೆದುಕೊಟ್ಟ ಪಾವತಿಯು ಅದಾಗಿತ್ತು. ಅದನ್ನು ಓದಿದೊಡನೆ ಶಂಕರಪ್ಪನ ಕುತ್ತಿಗೆಯು ಬಿಗಿದುಬಂದಿತು. ಆತನಿಂದ ಮಾತಾಡುವದಾಗಲಿಲ್ಲ. ಕೂಡಲೆ ಅವನು ಹೇಮಾದ್ರಿಯನ್ನು ಬಿಗಿದಪ್ಪಿಕೊಂಡನು.

---

## [೧೨]

ಲೋಕದೊಳಗೆ ಎಷ್ಟೋ ಸಂಗತಿಗಳು ಬಹು ಚಮತ್ಕಾರದಿಂದ ಕೂಡುತ್ತವೆ. ಅದರಿಂದ ಅವನ್ನು ನೋಡುವವರಿಗೆ ಅತ್ಯಾಶ್ಚರ್ಯವಾಗುತ್ತದೆ. ಅದರಂತೆಯೇ ಪ್ರಸ್ತುತದ ನಮ್ಮ ಕಥಾನಕದ ಕೊನೆಗೆ ಆಯಿತು. ತುರಂಗದೊಳಗಿಂದ ಬಿಡಿಸಿಕೊಂಡಬಂದ ಮೇಲೆ ಶಂಕರಪ್ಪನನ್ನು ಆತನ ಮನೆಗೆ ಹೋಗಗೊಡದೆ, ಬಸಲಿಂಗಪ್ಪನು ತನ್ನ ಮನೆಗೆ ಕರೆತಂದನು. ಹಾಗೆ ಮಾಡುವದರಲ್ಲಿ ಅವನದೊಂದು ಉದ್ದೇಶವಿತ್ತು. ಶಂಕರಪ್ಪನು ಬಂದಮೇಲೆ ಜಳಕ ಮಾಡಿದನು. ನಂತರ ಆತನಿಗೆ ಶಿವಕ್ಕನು ತುಸ ಉಪಹಾರವನ್ನು ಕೊಟ್ಟಳು. ಎರಡು ದಿನಗಳಿಂದ ಉಪವಾಸಬಿದ್ದ ಅವನಿಗೆ ಈಗ ಚನ್ನಾಗಿ ಹೊಟ್ಟೆ ಹಸಿದಿತ್ತು. ಅದರಿಂದ ಆತನು ಎಲ್ಲ ಉಪಹಾರವನ್ನೂ ನುಂಗಿ-ನೀರು ಹಿಡಿದದ್ದರಲ್ಲಿ ಆಶ್ಚರ್ಯವೇನು? ಬಳಿಕ ಶಿವಕ್ಕನು ಹೇಮಾದ್ರಿಯೊಡನೆ ಗಂಗವ್ವನ ಕಡೆಗೆ ನಡೆದಳು. ಬಸಲಿಂಗಪ್ಪನು ಶಂಕರಪ್ಪನನ್ನು ತನ್ನ ಕೂಡ್ರುವ ಕೋಣೆಗೆ ಕರೆದೊಯ್ದನು.

“ಶಂಕರಪ್ಪಾ, ಇನ್ನು ನಾನು ನಿನಗೆಷ್ಟೋ ಸಂಗತಿಗಳನ್ನು ತಿಳಿಸುವವನಿದ್ದೇನೆ. ಅವನ್ನೆಲ್ಲ ಕೇಳಿಕೊಂಡು...”

ಆತನನ್ನು ಮುಂದೆ ಮಾತಾಡಗೊಡದೆ ಶಂಕರಪ್ಪನು—“ಬಸಲಿಂಗಪ್ಪಣ್ಣಾ, ಇನ್ನು ನಾನು ನಿನ್ನನ್ನು ನನ್ನ ಒಡಹುಟ್ಟಿದ ಹಿರಿಯಣ್ಣನಂತೆ ತಿಳಿಯುತ್ತೇನೆ. ಇಂದಿನಿಂದ ನಿನ್ನ ಆಜ್ಞೆಯ ಹೊರತು ಯಾವ ಕೆಲಸವನ್ನೂ ಮಾಡಲಿಕ್ಕಿಲ್ಲ.”

"ನಿನ್ನಲ್ಲಿ ಇದೇ ಭಾವನೆಯು ಮೊದಲಿನಿಂದಿದ್ದರೆ ನಿನ್ನ ಮೇಲೆ ಈ ತರದ ಪ್ರಸಂಗವೇ ಬರುತ್ತಿರಲಿಲ್ಲ. ಇರಲಿ ನಿನ್ನೆ ನಿನ್ನನ್ನು ಹಿಡಿದೊಯ್ದಂದಿನಿಂದ ನಿನ್ನ ಮನೆಯಲ್ಲಿ ಯಾವ ಯಾವ ವಿಲಕ್ಷಣ ಸಂಗತಿಗಳು ನಡೆದವೋ ಅವನ್ನೆಲ್ಲ ಕೇಳಿ ನಿನಗೆ ಬಳ್ಳೇ ಆಶ್ಚರ್ಯವಾದೀತು. ನಿನ್ನ ಹೆಂಡತಿಯು......" ಎಂದು ಪ್ರಾರಂಭಿಸಿ, ಅವಳು ಮುಗುಟಯ್ಯನ ಸಹಾಯದಿಂದ ಜಾತಕಗಳನ್ನು ಅದಲು ಬದಲು ಮಾಡಿಸಿ ನಿಶ್ಚಯಿಸಿದ್ದ ಲಗ್ನವು ಹೇಗೆ ಮುರಿದು ಹೋಯಿತೆಂಬದರ ವರೆಗಿನ ಸಮಸ್ತ ಸಂಗತಿಯನ್ನೂ ಬಸಲಿಂಗಪ್ಪನು ಆತನಿಗೆ ತಿಳಿಸಿದನು.

"ಬಸಲಿಂಗಪ್ಪಣ್ಣಾ, ಈಗ ಏನು ಮಾತಾಡಬೇಕೆಂಬದೇ ನನಗೆ ತಿಳಿಯದಾಗಿದೆ. ಆ ಚಂಡಾಲಳು..."

"ಸುಮ್ಮನೆ ಸಿಟ್ಟಾಗುವದರಲ್ಲಿ ಪ್ರಯೋಜನವೇನು? ನೀನು ಪ್ರಯತ್ನ ಮಾಡಿದರೆ ನಿನ್ನ ಹೆಂಡತಿಯು ಇನ್ನು ಮೇಲಾದರೂ ದಾರಿ ತಪ್ಪಿ ನಡೆಯಲಿಕ್ಕಿಲ್ಲ; ಆದರೆ ನೀನು ಮಾತ್ರ ಎಚ್ಚರದಿಂದ ನಡೆಯಬೇಕು."

"ನಿನ್ನ ಮಾತಿಗೆ ಹೊರತಾಗಿ ಎಂದೂ ನಡೆಯಲಿಕ್ಕಿಲ್ಲ" ಎಂದು ಶಂಕರಪ್ಪನು ಪುನಃ ನುಡಿಯಲು, "ಹಾಗೇ ಆಗಲಿ; ಆದರೆ ಶಂಕರಪ್ಪಾ, ನಿನ್ನ ಮಗಳಿಗೆ ಮಂಗಳಗ್ರಹವಿದೆಯಷ್ಟೇ? ಆಕೆಗೆ ನಾನೊಬ್ಬ ಅಂಥ ಮಂಗಳ ಗ್ರಹವಿರುವ ವರನನ್ನೇ ನೋಡಿಟ್ಟಿರುತ್ತೇನೆ. ಆತನು ನಮ್ಮ ಗಿರಣಿಯಲ್ಲಿ ಜಲೋ ಕಸಬುದಾರನಿದ್ದು, ಆತನ ಹೊಲ-ಮನೆಯ ಉತ್ಪನ್ನವೂ ತಕ್ಕಮಟ್ಟಿಗೆ ಚನ್ನಾಗಿ ಇದೆ. ನಾನು ಹೇಳಿದರೆ ಆತನು ನಿನ್ನ ಮಗಳನ್ನು ವರಿಸಲಿಕ್ಕೆ ಒಲ್ಲೆನೆನ್ನಲಿಕ್ಕಿಲ್ಲ. ಹೀಗೆ ಬಸವ್ವನ ಲಗ್ನವು ಕೂಡಿತೆಂದರೆ, ಆಮೇಲೆ ಚಿನ್ನವ್ವನದು ವೇಣಪುರದ ಶೆಟ್ಟರ ಮಗನೊಡನೆ ಚಿನ್ನವ್ವನ ಜಾತಕವು ಹೇಗೂ ಕೂಡಿಬಿಟ್ಟಿದೆ; ಅಲ್ಲದೆ ಆಕೆಯ ಸ್ವಭಾವಪರಿಚಯವೂ ಅವರಿಗಾಗಿದೆ. ನಾವು ಹೇಳಿದರೆ, ಅವರು ಆಕೆಯನ್ನು ತಮ್ಮ ಮಗನೊಡನೆ ಕುಣಿದಾಡುತ್ತ ಮಾಡಿಕೊಳ್ಳುವರು. ಇನ್ನು ಉಳಿಯಿತು, ಹೇಮಾದ್ರಿಯ ವಿವಾಹದ ವಿಚಾರವು. ನನ್ನ ಮಗಳಾದ ಪುಟ್ಟವ್ವನನ್ನು ಆತನಿಗೆ ಕೊಡಬೇಕೆಂದು ನಾವು ಎಂದೋ ಮನಸ್ಸಿನಲ್ಲಿ ನಿಶ್ಚಯಿಸಿದ್ದೇವೆ. ಅದಕ್ಕೆ ನಿನ್ನ ಹೆಂಡತಿಯೂ, ಗಂಗಮ್ಮನವರೂ ಒಪ್ಪಿರುತ್ತಾರೆ. ಅಂದಬಳಿಕ ಅದೂ ಆಗಿಹೋಗಲಿ. ಮನೆಯ ಬಾಗಿಲಲ್ಲಿ ಮೂರು ಲಗ್ನಗಳನ್ನು ಒಮ್ಮೆಲೆ ಮಾಡಬಾರದೆಂದು ಜನರು ಆಕ್ಷೇಪಿಸಬಹುದು. ಅದಕ್ಕಾಗಿ ನಾವು ಒಂದು ಧರ್ಮಾರ್ಥ ಲಗ್ನವನ್ನು ಇವುಗಳಲ್ಲಿ ಮಾಡಿಬಿಡೋಣ. ಅಗೋ ಆ ನಮ್ಮ ದೈವಜ್ಞ-ಮುಗುಟಯ್ಯನವರಿರುವರಲ್ಲವೆ?

ಅವರ ಮಗನೊಬ್ಬನು ಲಗ್ನವಾಗತಕ್ಕವನಿದ್ದಾನೆ. ಆತನಿಗೆ ಅವರ ಅಕ್ಕ್ರರೊಳಗಿನ ಕನ್ಯೆಯೂ ನಿಶ್ಚಿತವಾಗಿದೆ. ಮುಗುಟಯ್ಯನು ನನಗೆ ಹ್ಯಾಗೂ ಸಹಾಯಮಾಡಲು ಪ್ರಯುಕ್ತಪಟ್ಟಿದ್ದನು; ಆದ್ದರಿಂದ ನಾವು ಈಗ ಅವನ ಮಗನ ಲಗ್ನಮಾಡಿ ಆತನ ಆ ಉಪಕಾರವನ್ನು ತೀರಿಸಿಕೊಳ್ಳೋಣ. ಯಾಕೆ ಶಂಕರಪ್ಪಾ, ನನ್ನ ಆಲೋಚನೆಯು ನಿನಗೆ ಸರಿದೋರುವದಷ್ಟೇ? ವಿಚಾರಮಾಡಿ ತಿಳಿಸು" ಎಂದು ಬಸಲಿಂಗಪ್ಪನು ಅಂದನು. ಶಂಕರಪ್ಪನು ಅದಕ್ಕೆ ತಲೆಹಾಕಿದನು.

ಬಳಿಕ ಬಸಲಿಂಗಪ್ಪನು ಶಂಕರಪ್ಪನೊಡನೆ ಶೆಟ್ಟರ ಸಂಗಪ್ಪನ ಮನೆಗೆ ನಡೆದನು. ಇವರು ಬರುವ ಕಾಲಕ್ಕೇ ಶೆಟ್ಟರ ಮನೆಯೊಳಗೆ ಕೆಳಗೆ ಬರೆದಪ್ರಕಾರ ಆಲೋಚನೆಯು ನಡೆದಿತ್ತು. ಅದನ್ನು ಅವರಿಬ್ಬರೂ ಬಾಗಿಲಹೊರಗೆ ನಿಂತು ಕೇಳಿಕೊಂಡರು.

ಒತ್ತಟ್ಟಿಗೆ ಸಿದ್ದಪ್ಪನೂ ಸಂಗಪ್ಪನೂ ಸಚಿಂತ ಮುದ್ರೆಯಿಂದ ವಿಚಾರಮಗ್ನರಾಗಿದ್ದರು. ಬಾಗಿಲ ಮರೆಗೆ ನಿಂತು ಯಾದವ್ವನು ಅವರೊಡನೆ ಮಾತಾಡುತ್ತಿದ್ದಳು. ಅವರು ಇನ್ನು ಮರಳಿ ತಮ್ಮೂರಿಗೆ ಹೋಗಬೇಕೆಂದು ನಿಶ್ಚಯಿಸಿದ್ದರು. ಆದರೆ ಲಗ್ನಕ್ಕೆಂದು ಹೋದವರು ಮಗನ ಲಗ್ನ ಮಾಡದೆ ಹಾಗೆಯೇ ಬಂದರೆಂದು ಜನರೆಂದರೆ ತನ್ನ ಲೌಕಿಕಕ್ಕೆ ಕುಂದು ಬರುವದಲ್ಲದೆ, ತನಗೆ ಒಂದು ಬಗೆಯ ಲಾಂಛನವೂ ಆನಿಸುವದೆಂದು ಸಂಗಪ್ಪನು ಅಂದನು.

ಆಗ ಯಾದವ್ವ—"ನಮ್ಮ ಚನ್ನಬಸವನ ಲಗ್ನ ಮಾಡದೆ ಹಾಗೆಯೇ ಹೋದರೆ ಜನರು ಆಡಿಕೊಳ್ಳುವದೇನೋ ನಿಜ; ಆದರೆ ಮುಂದಿಯ ಮಾತಿನ ಕಡೆಗೆ ಲಕ್ಷ್ಯಕೊಡಬೇಕೋ, ನಮ್ಮ ಮಗನ ಹಾಗು ಮನೆತನದ ಹಿತದ ಕಡೆಗೆ ಲಕ್ಷ್ಯಕೊಡಬೇಕೋ? ಇಷ್ಟರಲ್ಲಿ ನಮ್ಮ ಚನ್ನಬಸವನ ಲಗ್ನವಾಗದಿದ್ದರೂ ಚಿಂತಿಯಿಲ್ಲ. ಅವನೇನೂ ಮುದುಕನಾಗಿರುವದಿಲ್ಲ"

ಇಷ್ಟರಲ್ಲಿ ಬಸಲಿಂಗಪ್ಪನು ಶಂಕರಪ್ಪನೊಡನೆ ಮನೆಯೊಳಗೆ ಕಾಲಿಟ್ಟದ್ದರಿಂದ ಆ ಭಾಷಣವು ಅಲ್ಲಿಗೇ ಕಟ್ಟಾಯಿತು. ಬಸಲಿಂಗಪ್ಪನೊಡನೆ ಬಂದ ಶಂಕರಪ್ಪನನ್ನು ನೋಡಿ ಅಲ್ಲಿದ್ದವರಿಗೆಲ್ಲ ಬಹಳ ವಿಸ್ಮಯಾಶ್ಚರ್ಯವೆನಿಸಿತು. ಬಸಲಿಂಗಪ್ಪನು ಅವರಿಗಾದ ಆಶ್ಚರ್ಯವನ್ನು ಒಂದೆರಡು ಮಾತಿನಲ್ಲಿ ಹೋಗಲಾಡಿಸಿದನು. ಬಳಿಕ ಆತನು—ಸಂಗಪ್ಪನವರೇ, ನಿಮಗೊಂದು ಸಂತೋಷದ ಸುದ್ದೀ ತಿಳಿಸುವೆನು. ನಮ್ಮ ಶಂಕರಪ್ಪನ ಮೇಲೆ ದುಡ್ಡು ಅಪಹರಿಸಿದ ನಿಂದ್ಯ ಆರೋಪವಿತ್ತಲ್ಲವೆ? ಇವರಿಗಾಗದ ಕೆಲವು ದುಷ್ಟರು ಕೂಡಿ ಸುಮ್ಮ ಸುಮ್ಮನೆ ಹಾಗೆ ಹೂಲಿ ಎಬ್ಬಿಸಿದ್ದರು. ಆ ಸಂಕಟ

ದಿಂದ ಶಂಕರಪ್ಪನು ಪಾರಾಗಿರುವನು. ಇನ್ನು ಮುಂದಿನ ವಿಚಾರಕ್ಕಾಗಿಯೇ ನಾವು ನಿಮ್ಮಲ್ಲಿಗೆ ಬಂದಿರುತ್ತೇವೆ.

"ಅದೇನು" ಎಂದು ಸಂಗಪ್ಪನು ಪ್ರಶ್ನೆಮಾಡಲು,

ಬಸಲಿಂಗಪ್ಪ—ಮುಗುಟಯ್ಯನವರು ಸುಳ್ಳು ಜಾತಕ ತೋರಿಸಿ ನಿಮ್ಮನ್ನು ಇಷ್ಟು ಗೊಂದಲದಲ್ಲಿ ಕೆಡವಿದರು. ಆದದ್ದಾಯಿತು. ಆದರೆ ಯಾವ ಜಾತಕದ ಹುಡುಗಿಯೊಡನೆ ನಿಮ್ಮ ಹುಡುಗನ ಜಾತಕವು ಚನ್ನಾಗಿ ಕೂಡುವದೋ ಆ ಹುಡುಗಿಯೊಡನೆ-ಚಿನ್ನವ್ವನೊಡನೆ-ನಿಮ್ಮ ಮಗನ ಮದುವೆ ಮಾಡಲಿಕ್ಕೆ ನಿಮ್ಮ ಇಚ್ಛೆ ಇದೆಯೋ ಇಲ್ಲವೋ? ಬೇಕಾದರೆ ಇನ್ನೊಮ್ಮೆ ಅವೆರಡೂ ಜಾತಕಗಳನ್ನು ನೋಡಿಸಿರಿ. ಆ ಹುಡುಗಿಯ ಸ್ವಭಾವ-ಗುಣಗಳನ್ನೂ ಪರೀಕ್ಷಿಸಿರಿ. ಸರಿದೋರಿದರೆ ಲಗ್ನಕ್ಕೆ ಸಮ್ಮತಿಪಡಿರಿ. ಲಗ್ನವಾಗದೆ ಹಾಗೆಯೇ ಹೋಗುವದರಿಂದ ನಿಮ್ಮ ಹಾಗು ಶಂಕರಪ್ಪ ಉಭಯತರ ಲೌಕಿಕಕ್ಕೆ ಕಳಂಕವುಂಟಾಗುವದು.

ಬಸಲಿಂಗಪ್ಪನ ಈ ಮಾತು ಆ ಸೆಟ್ಟರ ಮನೆಯೊಳಗಿನ ಎಲ್ಲರಿಗೂ ಸಮ್ಮತವಾವಾಯಿತು. ಅಷ್ಟರಲ್ಲಿ ಶಿವಕ್ಕನೊಡನೆ ಗಂಗವ್ವನೂ ಅಲ್ಲಿಗೆ ಬಂದಳು. ಅವಳನ್ನು ನೋಡಿ ಯಾದವ್ವನು ಮುಂದೆ ಬಂದು—"ಪಾಪ! ಇಷ್ಟು ಅಶಕ್ತರಾದ ನೀವು ಇಲ್ಲಿಗೇಕೆ ಬಂದದ್ದು? ಕರೆಯಿಸಿದ್ದರೆ ನಾನೇ ಬರುತ್ತಿದ್ದೆನಲ್ಲ?" ಎಂದಳು.

ಗಂಗವ್ವನು ತಾನು ಬಂದದ್ದರ ಕಾರಣ ಹೇಳಬೇಕೆನ್ನುವಷ್ಟರಲ್ಲಿ ಬಸಲಿಂಗಪ್ಪನೇ ಎಲ್ಲರಿಗೂ ಕೇಳುವಹಾಗೆ—ಹಾಗಾದರೆ ಈ ಮೊದಲು ಗೊತ್ತಾದಂತೆ ನಾಳೆಯೇ ಲಗ್ನಗಳಾಗಲಿ ಚಿನ್ನವ್ವನಿಗೆ ನಿಮ್ಮ ಚನ್ನಬಸವಪ್ಪನು, ಬಸವ್ವನಿಗೆ ನಮ್ಮ ಕಾರಖಾನೆಯೊಳಗಿನ ಮಹಾರುದ್ರಪ್ಪನು, ನನ್ನ ಪುಟ್ಟವ್ವನಿಗೆ ಹೇಮಾದ್ರಿಯು ವರಗಳು. ಹಂದರದಲ್ಲಿ ಮೂರು ಲಗ್ನಗಳಾಗಬಾರದೆಂದು ನಮ್ಮ ಮುಗುಟಯ್ಯನ ಮಗನದೊಂದು ಲಗ್ನ. ಹೀಗೆ ನಾಲ್ಕೂ ವಿವಾಹಗಳು ನಾಳೆಯೇ ಆಗತಕ್ಕದ್ದು, ಎಂದು ಹೇಳಿದನು.

ಗೊತ್ತಾದಮೇರೆಗೆ ಎಲ್ಲ ವಿವಾಹಗಳೂ ಬಹು ಚಂದವಾಗಿ ಪೂರೈಸಿದವು. ಲಗ್ನಕಾಲದಲ್ಲಿ ಯಾವತರದ ಜಗಳ-ತಂಟೆಗಳೂ ಆಗಲಿಲ್ಲ. ವಿವಾಹವಾದ ಕೆಲದಿನಗಳಲ್ಲಿಯೇ ಗಂಗವ್ವನ ಬೇನೆಯು ಸಂಪೂರ್ಣವಾಗಿ ಗುಣವಾಯಿತು. ಈಗ ಅವಳು ಮನೆಯಲ್ಲಿ ಹಿರಿಯಳಾಗಿ ಸುಖದಿಂದ ಇರಲಾರಂಭಿಸಿದಳು. ಸಾವಕ್ಕನ ಸ್ವಭಾವದಲ್ಲಿ ವಿಲಕ್ಷಣವಾದ ಹೆಚ್ಚು-ಕಡಿಮೆಯಾಯಿತು. ಶಂಕರಪ್ಪನು ನಿರ್ವ್ಯಸನೀ-ಪುರುಷನೆಂದು ಮಾದರಿ ತಕ್ಕೊಳ್ಳಲಿಕ್ಕೆ ತಕ್ಕವನಾದನು. ಬಸಲಿಂಗಪ್ಪನ ಮುರವತ್ತಿನಿಂದ ಶೇಟಜಿಯು ಅವನನ್ನು ಪುನಃ ನೌಕರಿಗಿಟ್ಟುಕೊಂಡನು. ಬಸ

ಲಿಂಗಪ್ಪನು ತನ್ನ ಗಿರಣಿಯ ಎಲ್ಲ ಹಿರಿಯತನವನ್ನು ಈಚೆಗೆ ತನ್ನ ಅಳಿಯನಾದ ಹೇಮಾದ್ರಿಗೇ ಒಪ್ಪಿಸಿಬಿಟ್ಟಿದ್ದನು. ಬಸಲಿಂಗಪ್ಪನಿಗೆ ಪುಟ್ಟವ್ವನ ಹೊರತು ಹೆಣ್ಣಾಗಲಿ-ಗಂಡಾಗಲಿ ಮಕ್ಕಳಿರಲಿಲ್ಲ. ಆದರಿಂದ ಹೇಮಾದ್ರಿಯೇ ಅವನ ಎಲ್ಲ ಇಸ್ಟೇಟಿಗೆ ಮಾಲಿಕನು. ಮಹಾರುದ್ರಪ್ಪನಿಗೆ-ಬಸವ್ವನ ಗಂಡನಿಗೆ-ಲಗ್ನವಾದಂದಿನಿಂದ ತಿಂಗಳಿಗೆ ಹದಿನೈದು ರೂಪಾಯಿಯಂತೆ ಹೆಚ್ಚು ಸಂಬಳ ಕೊಡಬೇಕೆಂದು ಬಸಲಿಂಗಪ್ಪನು ಹೇಮಾದ್ರಿಗೆ ತಿಳಿಸಿದನು. ವಾಚಕರೇ, ಇನ್ನು ನಾವು ಆ ನಮ್ಮ ಮೂರೂ ಜತೆ ದಂಪತಿಗಳು ಹೇಗೆ ಹೇಗೆ ಬಾಳುವೆ ಮಾಡುವರೆಂಬದನ್ನಷ್ಟು ನಿಮಗೆ ನಿವೇದಿಸಿ, ಈ ಕಥಾನಕವನ್ನು ಮುಗಿಸುವ ಬೇತಿನಲ್ಲಿರುತ್ತೇವೆ.

ಲಗ್ನವಾದ ಕೆಲ ದಿನಗಳಲ್ಲಿಯೇ ಪುಟ್ಟವ್ವನು ದೊಡ್ಡವಳಾದುದರಿಂದ ತಮ್ಮ ಅತ್ತೆಯ ಮನೆಗೆ ಬಂದಳು. ಆಸ ದಿನಗಳಲ್ಲಿಯೇ ಸಾವಕ್ಕನು ಅವಳನ್ನು ಬಸವ್ವನಿಗಿಂತಲೂ ಹೆಚ್ಚು ಪ್ರೀತಿಸಿ, ಅವಳೊಡನೆ ಒಳ್ಳೇ ಮಮತೆಯಿಂದ ನಡೆಯುತ್ತಿದ್ದಳೆಂದಬಳಿಕ, ಪುಟ್ಟವ್ವನು ಗಂಡನ ಹಾಗು ಅತ್ತೆ-ನಾದಿನಿಯರ ಪ್ರೇಮಕ್ಕೆ ಪಾತ್ರಳಾಗಿದ್ದಳೆಂದು ಬೇರೆ ಹೇಳಬೇಕಾಗಿಲ್ಲ.

ಚೆನ್ನವ್ವನಂತೂ ಸಾವಕ್ಕನಂಥ ಜಾಜ್ವಲ್ಯಸ್ವಭಾವದವಳ ಕೈಯಲ್ಲಿ ಹನ್ನೆರಡು ವರ್ಷಗಟ್ಟಲೆ ಸುಳಿತವಳು; ಮೇಲಾಗಿ ಈಕೆಯ ಸ್ವಭಾವಕ್ಕೆ ಈಕೆಯ ಅತ್ತೆಯ ಮನೆಯವರೂ, ಗಂಡನೂ ಲಗ್ನಕ್ಕಿಂತ ಪೂರ್ವದಲ್ಲಿಯೇ ಮನಸೋತಿದ್ದರು. ಆದರಿಂದ ಇವಳಿಗೆ ತನ್ನ ಸಂಸಾರದಲ್ಲಿ ಯಾವ ತೊಂದರೆಯೂ ಆಗಲಿಲ್ಲ. ಇಷ್ಟೇ ಅಲ್ಲ; ಇಂಥ ಗುಣಪೂರ್ಣಳಾದ ಸೊಸೆಯು ತಮ್ಮ ಪೂರ್ವಜನ್ಮದ ಪುಣ್ಯದಿಂದಲೇ ತಮಗೆ ಲಭಿಸಿದಳೆಂದು ವೇಣಪುರದ ಶೀಲವಂತ ಶೆಟ್ಟರ ಮನೆಯವರು ಈಕೆಯನ್ನು ಬಹುಪರಿಯಾಗಿ ಕೊಂಡಾಡುತ್ತಿದ್ದರು.

ಇನ್ನು ನಮ್ಮ ಅಚ್ಚುದ ಕೂಸು ಬಸವ್ವನ ಸಮಾಚಾರವನ್ನಷ್ಟು ತೆಗೆದುಕೊಳ್ಳೋಣ. ಲಗ್ನವಾಗ-ವಾಗಲೆ ಮಹಾರುದ್ರಪ್ಪನಿಗೆ ಆಕೆಯ ದುಗುರ್ಣಗಳ ಮಾಹಿತಿಯಿತ್ತು. ಆಕೆಯು ಸಾವಕ್ಕನ ದುರಭಿಮಾನದಿಂದ ಪರಿಪೋಷಿತಳಾದವಳು. ಅಂದವೇಲೆ ಆಕೆಯ ಸಂಸಾರವೂ ತಾಯಿಯಂತೆ ತಾಪದಾಯಕವೇ ಆಗ ಹತ್ತಿತು. ಬಸವ್ವನು ಗಂಡನ ಮನೆಗೆ ಬಾಳುವೆ ಮಾಡಲು ಹೋದ ಕೆಲ ದಿನಗಳ ಮೇಲೆ ಗಂಡನ ತಾಯಿಯು ಬೇನೆಯಿಂದ ಮಲಗಿದಳು. ಸೊಸೆಯು ಮನೆಗೆ ಬಂದರೂ ಮಹಾರುದ್ರಪ್ಪನ ತಾಯಿಯೇ ಎಲ್ಲ ಮನೆಗೆಲಸ ಮಾಡಿಕೊಳ್ಳುತ್ತಿದ್ದಳು. ಅದರಿಂದ ಈ ವರೆಗೆ ಬಸವ್ವನ ಸಂಬಂಧದ ಯಾವ ಗುಲ್ಲೂ ಹೊರಬಿದ್ದಿರಲಿಲ್ಲ.

ಇಂದು ಅತ್ತೆಯು ಬೇನೆಯಿಂದ ಬಳಲುತ್ತ ಒಂದು ಮೂಲೆಯಲ್ಲಿ ಬಿದ್ದುಕೊಂಡಿದ್ದರೆ ಸೊಸೆಯು ದುರಭಿಮಾನದಿಂದ ಸಿಟಗೊಂಡು ಮತ್ತೊಂದು ಕಡೆ ಹಾಸಿಕೊಂಡು ಮಲಗಿದ್ದಳು. ಮಹಾರುದ್ರಪ್ಪನು ಬೆಳಗ್ಗೆ ತನ್ನ ಗಿರಣಿಯ ಕೆಲಸಕ್ಕೆ ಹೋಗಿದ್ದನು. ಸಂಜೆಗೆ ಅವನು ಮನೆಗೆ ಬರಲು, ಬಸವ್ವನು ಹಾಸಿಗೆಯಿಂದೆದ್ದು ಅದೇ ಊರಲ್ಲಿದ್ದ ತನ್ನ ತವರು ಮನೆಯ ದಾರಿ ಹಿಡಿದಳು ಮಹಾರುದ್ರಪ್ಪನು ಅವಳನ್ನು ಹೋಗಗೊಡದೆ ಅಡ್ಡಗಟ್ಟಿ—ಅದೆಲ್ಲಿಗೆ ನಡೆದೆ? ಎಂದು ಕೇಳಲು, ಅವ್ವನ ಮನೆಗೆ. ಬೆಳಗಿನಿಂದ ಉಪವಾಸ ಬಿದ್ದರೂ ಇಲ್ಲಿ ನನ್ನನ್ನು ಕೇಳುವರಾರು? ಎಂದು ಉಚ್ಚಸ್ವರದಿಂದ ನುಡಿದಳು.

"ಹೋಗಬೇಡ, ನಿನಗೆ ಅಡಿಗೆ ಮಾಡಿ ಹಾಕಲಿಕ್ಕೆ ನಿಮ್ಮವ್ವನು ದಾಸ-ದಾಸಿಯರನ್ನು ಕಳಿಸಿರುವಳೇ? ಒಳಗೆ ಹೋಗು, ಒಲೆ ಹೊತ್ತಿಸಿ ಅಡಿಗೆ ಮಾಡು. ಅವ್ವನಿಗೂ ಉಣಿಸು; ನನಗೂ ನೀಡು; ಬಳಿಕ ನೀನೂ ಉಣ್ಣುವಿಯಂತೆ" ಎಂದು ಮಹಾರುದ್ರಪ್ಪನು ಸೌಮ್ಯಶಬ್ದಗಳಿಂದ ಹೇಳಿದನು ಆಗ ಬಸವ್ವನು ಕಿಡಿಗಣ್ಣಿನಿಂದ ಗಂಡನಕಡೆಗೆ ನೋಡುತ್ತ ನಿಂತಲ್ಲಿಯೇ ನಿಂತುಬಿಟ್ಟಳು. ಅವಳ ಆ ನೋಟವು ತಾನು ಅಡಿಗೆ ಮಾಡುವವಳಲ್ಲವೆಂದು ಸೂಚಿಸುತ್ತಿತ್ತು. ಅದನ್ನು ಅರಿತು ಅವನು—"ಹಾಗಾದರೆ ಇಲ್ಲಿಯೇ ಉಪವಾಸವಾಗಿ ಬಿದ್ದಿರು; ಯಾವ ದಿನ ನೀನು ಸ್ವಂತ ಅಡಿಗೆ ಮಾಡುವಿಯೋ ಅಂದೇ ಉಣ್ಣುವಿಯಂತೆ ತವರುಮನೆಗೆ ಹೋದರೆ ಕಾಲಗಣಿಕೆ ಮುರಿದೇನು, ತಿಳಿಯಿತೇ?" ಎಂದು ಅವಳಿಗಿಂತಲೂ ಉಚ್ಚಸ್ವರದಿಂದ ಗದ್ದರಿಸಿದನು. ಆ ದುರಭಿಮಾನಿಯು ಅಂದು ತವರುಮನೆಗೂ ಹೋಗಲಿಲ್ಲ; ಅಡಿಗೆಯನ್ನೂ ಮಾಡಲಿಲ್ಲ; ಉಪವಾಸವೇ ಬಿದ್ದುಕೊಂಡಳು. ದಿನಾಲು ಬೆಳಗ್ಗೆ ಹಾಗು ಸಾಯಂಕಾಲಕ್ಕೆ ಅವಳು ತವರುಮನೆಗೆ ಹೊರಡಬೇಕು. ಅವನು ಗದ್ದರಿಸಿ ನುಡಿದು ಅವಳನ್ನು ಮನೆಯೊಳಗೆ ಕಳಿಸಬೇಕು. ಈ ಮೂರು ದಿವಸ ಮಹಾರುದ್ರಪ್ಪನು ಹೆಂಡತಿಗೆ ತಿಳಿಯದಹಾಗೆ ನೆರೆಮನೆಯವರಿಂದ ಅಡಿಗೆ ಮಾಡಿಸಿ ತಾಯಿಗೆ ಹಾಕಿಸುತ್ತಿದ್ದನು; ತಾನೂ ಉಂಡುಬರುತ್ತಿದ್ದನು. ಕಡೆಗೆ ಇವಳು ಉಪವಾಸ ಬಿದ್ದು ಸತ್ತರೆ, ತನಗೆಲ್ಲಿ ಪೇಚು ಬರುವದೋ ಎಂದು ಊಹಿಸಿ, ಮಹಾರುದ್ರಪ್ಪನು ಹೆಂಡತಿಯ ಆ ಉದ್ಧಾಮತನದ ವರ್ತನವನ್ನು ಬಸಲಿಂಗಪ್ಪನವರ ಹೆಂಡತಿಗೆ ತಿಳಿಸಿದನು. ಆಕೆಯು—"ಇಂಥ ಹುಡುಗಿಯರನ್ನು ಹಾದಿಗೆ ತರಲಿಕ್ಕೆ ಹೆದರಿಕೆ, ಬೆದರಿಕೆ, ಹೊಡೆಯುವದು, ಬಡಿಯುವದು ಮುಂತಾದ ರಾಕ್ಷಸೀ ಉಪಾಯಗಳನ್ನು ಮಾಡಬಾರದು; ಆದರೆ ಅವರ ದುರಭಿಮಾನಕ್ಕೆ ಆಸ್ಪದ ಸಿಗದ

ಹಾಗೆ ಅವರೊಡನೆ ಹಲವೋ ಮಾತಾಡಿಯೋ ಅವರಿಂದ ಕೆಲಸ ಮಾಡಿಸಿಕೊಳ್ಳಬೇಕು. ಹೇಳಿದ ಕೆಲಸವನ್ನು ಅವರು ತಾವಾಗಿ ಮಾಡುವವರೆಗೆ ಅವರೊಡನೆ ಸಲಿಗೆಯಿಂದ ವರ್ತಿಸಬಾರದು........" ಎಂದು ಅವನಿಗೆ ಹೇಳಿ ಕಳಿಸಿದಳು. ಮಹಾರುದ್ರಪ್ಪನು ಅದೇ ಮಂತ್ರದಿಂದ ನಡೆಯಲು, ಕಡೆಗೆ ನಾಲ್ಕನೇ ದಿವಸ ಬಸವ್ವನು ತುಸ ಮೆತ್ತಗಾದಳು. ಮೂರು ದಿನಗಳಿಂದ ಅನ್ನದ ಕಣವುಕೂಡ ಹೊಟ್ಟೆಯಲ್ಲಿ ಸೇರದ್ದರಿಂದ ಅವಳಿಂದ ಹಾಸಿಗೆ ಬಿಟ್ಟು ಏಳುವದು ಸಹ ಆಗಲಿಲ್ಲ. ಆಗ ಅವಳು ಹೇಗಾದರೂ ಮಾಡಿ ಹಾಸಿಗೆಯಿಂದ ಎದ್ದು, ಗಂಡನೆದುರಿಗೆ ಬಂದು ನಿಂತು—ನನಗೆ ಹೊಟ್ಟೆ ಬಹಳ ಹಸಿದದೆ.

" ಹಾಗಾದರೆ ಒಲೆ ಹೊತ್ತಿಸಿ ಅಡಿಗೆ ಮಾಡು. "

" ಆದರೆ ನನಗೆ ಅಡಿಗೆ ಮಾಡಲಿಕ್ಕೆ ಬರುವದಿಲ್ಲವಲ್ಲ. "

"ಬರುವದಿಲ್ಲ, ಬರುವದಿಲ್ಲವೆಂದರೆ ಎಂದೂ ಬರಲಿಕ್ಕಿಲ್ಲ; ಒಲೆಯ ಎದುರಿಗೆ ಹೋಗಿ ಕುಳಿತು ಪ್ರಯತ್ನ ಮಾಡು. ಅಂದರೆ ಬರುವದೋ ಇಲ್ಲವೋ ನೋಡೋಣ. ಯಾವುದೊಂದು ಪದಾರ್ಥವು ನಿನಗೆ ಮಾಡಲಿಕ್ಕೆ ಬರದಿದ್ದರೆ, ಅದನ್ನು ಕಲಿಸಲಿಕ್ಕೆ ನಾನು ಸಿದ್ಧನಿದ್ದೇನೆ.

ಇಂದು ಮಹಾರುದ್ರಪ್ಪನು ಹೇಳಿದಂತೆ ಬಸವ್ವನು ಅಡಿಗೆಯ ಮನೆಯನ್ನು ಪ್ರವೇಶಿಸಿದಳು. ಹೊಟ್ಟೆಯ ಉರಿಗಾಗಿ ಒಲೆ ಹೊತ್ತಿಸಿದಳು. ಸಂಕಟಕ್ಕಾಗಿ ಅಕ್ಕಿ ತೊಳೆದಳು. ಬವಳಿ ಬರುತ್ತದೆಂದು ಬೇಳೆ ಬೆಯ್ಯಿಸಿದಳು. ಅನ್ನವು ಹಸಿವೆಗೆ ಸಾಲದೆಂದು ರೊಟ್ಟೀ ಸುಡಹತ್ತಿದಳು; ಆದರೆ ಕೊಣಬಿಗೆಯಲ್ಲಿ ಒಡೆದ ರೊಟ್ಟಿಯನ್ನು ಹಂಚಿನ ಮೇಲೆ ಹಾಕಲಿಕ್ಕೆ ಅವಳಿಗೆ ಬರಲಿಲ್ಲ. ಆಗ ಮಹಾರುದ್ರಪ್ಪನು ಅದನ್ನು ಹೇಗೆ ಎತ್ತಿ ಹಂಚಿನ ಮೇಲೆ ಒಗೆಯಬೇಕೆಂಬದನ್ನು ಹೆಂಡತಿಗೆ ತಿಳಿಸಿ ಹೇಳಿದನು. ಈ ಪ್ರಕಾರದ ಗಂಭೀರ ಗಂಡನ ಸಹವಾಸದಿಂದ ಬಾಲ್ಯದಿಂದ ಮೈಯುಂಡ ತಾಯಿಯ ದುರ್ನಡತೆಗಳ ನಾಮಶೇಷವಾಗಿ ಬಸವ್ವನು ತುಸದಿನಗಳಲ್ಲಿಯೇ ಒಳ್ಳೇ ಗೃಹಿಣಿಯಾಗಿ ತನ್ನ ಸಂಸಾರವನ್ನು ಸಾಗಿಸಲುಪಕ್ರಮಿಸಿದಳು. ಅವಳು ತುಸ ದಿನಗಳಲ್ಲಿಯೇ ಹೇಮಣ್ಣನನ್ನೂ, ಚಿನ್ನಕ್ಕನನ್ನೂ ಬೆನ್ನಿಲೆ ಬಿದ್ದ ಬಂಧು-ಭಗಿನಿಯರಂತೆ ಪ್ರೀತಿಸಹತ್ತಿದಳು. ಗಂಗಮ್ಮನನ್ನು ಹಡೆದ ತಾಯಿಗಿಂತಲೂ ಹೆಚ್ಚಾಗಿ ಉಪಚರಿಸಲಾರಂಭಿಸಿದಳು. ಸತ್ಸಹವಾಸದಿಂದ ದುರ್ಗುಣಗಳು ಮನುಷ್ಯಮಾತ್ರರಿಂದ ದೂರಾವೃತ್ತವಾಗುತ್ತವೆ. ಇಂತೇ

“ಸಜ್ಜನ ಕು ಸಜ್ಜನ ಮಿಲೇ ತೋ ಹಂಸನಮು ಕರ್ಪೂರ |
ದುರ್ಜನಕು ದುರ್ಜನ ಮಿಲೇ ತೋ ಭಂಗಮೆ ಧತ್ತೂರ ||”

ಎಂಬ ಹಿಂದುಸ್ತಾನೀ ನಾಣ್ಣುಡಿಯು ಪ್ರಸಿದ್ಧಿ ಹೊಂದಿದೆ.

× × × × ×

ಯಾವ ಗಂಗವ್ವನು ಇಷ್ಟು ದಿನ ನಿರಾಶ್ರಿತಳಾಗಿದ್ದರಿಂದ ಹೀನಳೂ, ದೀನಳೂ ಆಗಿದ್ದಳೋ ಅದೇ ಅವಳು ಈಗ ಬಳಗವಂತೆಯಾಗಿ ನಾಲ್ಕುಮಂದಿಗೆ ಬೇಕಾದ ಹೆಣ್ಣುಮಗಳಾಗಿದ್ದಳು. ಕುಸ ದಿನಗಳಲ್ಲಿಯೇ ದೈವಬಲದಿಂದ ಪುಟ್ಟವ್ವನ ಹೊಟ್ಟೆಯಲ್ಲಿ ಒಂದು ಗಂಡು ಶಿಶುವೂ, ಚಿನ್ನವ್ವನ ಬಸುರಿನಿಂದ ಒಂದು ಕನ್ಯಾರತ್ನವೂ ಜನಿಸಿದವು. ಅವು ತಮ್ಮ ಬಾಲಲೀಲೆ, ತೊದಲ್ನುಡಿಗಳಿಂದ ಅವ್ವನನ್ನು ಒಳ್ಳೇ ಆನಂದದಲ್ಲಿ ಕೆಡವಿದವು. ಗಂಗವ್ವನು ಈಚೆಗೆ ಕೆಲದಿನ ಮಗನ ಬಳಿಯಲ್ಲಿಯೂ, ಕೆಲದಿನ ಬಸವ್ವನ ಮನೆಯಲ್ಲಿಯೂ, ಮತ್ತೆ ಕೆಲವು ದಿವಸ ಚಿನ್ನವ್ವನ ಬಳಿಯಲ್ಲಿಯೂ ಇದ್ದು ಸುಖದಿಂದ ಕಾಲ ಕ್ರಮಿಸುತ್ತಿದ್ದಳು. ಹೇಮಾದ್ರಿಯು ಸಂಸಾರದ ಚಿಂತೆಯು ಆಕೆಗೆ ತಿಲಮಾತ್ರವೂ ಉಳಿದಿರಲಿಲ್ಲ. ಏಕೆಂದರೆ, ಸಾವಕ್ಕನು ಹೇಮಾದ್ರಿಯನ್ನೂ, ಆತನ ಹೆಂಡತಿ-ಮಕ್ಕಳನ್ನೂ ತನ್ನ ಹೊಟ್ಟೆಯ ಮಕ್ಕಳಿಗಿಂತಲೂ ಹೆಚ್ಚು ಪ್ರೀತಿಯಿಂದ ಸಲಹುತ್ತಿದ್ದಳು.

\+ + + + + + + +

ವಾಚಕರೇ, ಮನಗಂಡಿರಾ ಬಂಧುಪ್ರೇಮದ ಮಹತ್ವವನ್ನು! ತನ್ನ ಚಿಕ್ಕ ನೆಗೆಣ್ಣಿಯು ತನ್ನನ್ನೂ ತನ್ನ ಮಕ್ಕಳನ್ನೂ ಎಷ್ಟುಪರಿಯಿಂದ ಬೈದರೂ, ಅಂದರೂ, ಉಪವಾಸ ಕೆಡವಿದರೂ, ಯಾವಗಂಗವ್ವನು ತನ್ನಲ್ಲಿಯ ಬಂಧ ಪ್ರೇಮಕ್ಕೆ ಸ್ವಲ್ಪವೂ ವ್ಯತ್ಯಯ ಉಂಟಾಗದಂತೆ ಕಡೆತನಕ ಅವರ ಹಿತವನ್ನೇ ಬಯಸಿದಳೋ, ಯಾವ ಸದ್ಗುಣಿ ಹೇಮಾದ್ರಿ ಹಾಗು ಚಿನ್ನವ್ವನು ತಮ್ಮ ಚಿಗವ್ವ ಹಾಗು ಚಿಗವ್ವನ ಮಗಳಿಂದ ನಾನಾ ಯಾತನೆಗಳನ್ನು ಭೋಗಿಸಿದರೂ ಕಡೆಗೂ ಅವರನ್ನು ಬಿಟ್ಟುಕೊಡಗದೆ, ಅವರನ್ನೇ ಮನಮುಟ್ಟಿಸಿ ಪ್ರೀತಿಸುತ್ತಿದ್ದರೋ, ಆ ಹೆತ್ತವ್ವನ ಹಾಗು ಆ ಬಂಧು-ಭಗಿನಿಯರ ಬಂಧುಪ್ರೇಮದ ಅನುಕರಣವನ್ನು ನಾವೆಲ್ಲರೂ ಮಾಡಬಹುದಾಗಿದೆ.

ಸರ್ವೇಶನು ಸಕಲರಿಗೂ ಈ ಸದ್ಬುದ್ಧಿಯನ್ನು ಕೊಡಲಿ!

